


# ಸಪ್ತಗಿರಿ

ಬೆಲೆ: ಒಂದು ರೂಪಾಯಿ

ಸೆಪ್ಟಂಬರ್ 84

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ರಥವನೇರಿದ ರಥಿಕನಾರೇ ಪೇಳಮ್ಮಯ್ಯ
ಕಥಿತಧ್ಯಾತ ಸಂಸ್ತುತ ವಿತತಾನತ
ಹಿತಕರ ದಿವಿಷತ್ಪತಿ ಕಾಣಮ್ಮ ॥ ಪ ॥

ಹಾಟಕ ರತ್ನಸುಪೀಠ ಮಧ್ಯಮಂಟಪದಿ ಪೇಳಮ್ಮಯ್ಯ
ಕೋಟಿಭಾಸ್ಕರ ಪ್ರಭಾಟೋಪದಿ ರಾಜಿಸುವ ಪೇಳಮ್ಮಯ್ಯ
ತಾಟಂಕಯುತ ವಧೂಟಿಯರಿಕ್ಕೆಲದಲಿಹ ಪೇಳಮ್ಮಯ್ಯ
ಆಟದೆ ಕುರುಜ ಮಹಾಟವಿ ಸವರಿ ಕಿ
ರೀಟಿಯ ಸಲಹಿದ ಶ್ವೇತವಾಹನನೇ ಕೇಳಮ್ಮಯ್ಯ

ಭುಜಗರಾಜ ಫಣಿಮಣಿಮಂಡಲಮಂಡಿತನೇ ಪೇಳಮ್ಮಯ್ಯ
ವಿಜಯವರದ ಅರಿಗದಾಂಬುಜಧರಭುಜನೇ ಪೇಳಮ್ಮಯ್ಯ
ಗಜಚರ್ಮಧರಾದ್ಯನಿಮಿಷಗಣ ಸೇವಿತನೇ ಪೇಳಮ್ಮಯ್ಯ
ಅಜನ ನಾಭಿಯಲಿ ಪಡೆದು ಚರಾಚರ
ಸೃಜಿಸೆ ಪೇಳ್ದ ನೀರಜ(ನೆ) ಕಾಣಮ್ಮ

ಏತಾದೃಶ ಮಹಾಮಹಿಮ ರಮಾವಲ್ಲಭನೆ ಪೇಳಮ್ಮಯ್ಯ
ಶ್ವೇತದ್ವೀಪಾನಂತಾಸನ ವೈಕುಂಠವನುಳಿದು ಪೇಳಮ್ಮಯ್ಯ
ವೀತಭಯ ಜಗನ್ನಾಥ ವಿಠಲ ಬರಲೇಕೆ ಪೇಳಮ್ಮಯ್ಯ
ಭೂತಳ ಜನರಭಿಲಾಷೆ ಸಲಿಸಲು
ವಾತಾಶನ ಗಿರಿಗಿಳಿದ ಕಾಣಮ್ಮಯ್ಯ

— ಶ್ರೀ ಜಗನ್ನಾಥದಾಸರು.

# ಓದುಗರ ಓಲೆ

ಮಾನ್ಯರೆ;

ಜುಲೈ 84 ರ ಸಪ್ತಗಿರಿಯ ಮುಖಪುಟದಲ್ಲಿ ಮೂಡಿಬಂದ ವೆಂಕಟೇಶ್ವರಸ್ವಾಮಿಯು ತನ್ನ ದಶಾವತಾರಗಳನ್ನು ಪ್ರದರ್ಶಿಸುತ್ತ ಇಡೀ ಬ್ರಹ್ಮಾಂಡವನ್ನು ಆವರಿಸಿರುವ ದೃಶ್ಯ ನಯನ ಮನೋಹರವಾಗಿದ್ದಿತು. ಜೀವಿಗಳ ಹುಟ್ಟಿಗೆ ಕಾರಣಭೂತರಾದ ಪ್ರಕೃತಿ–ಪುರುಷನ್ನೂ ಕೂಡ ಇದರಲ್ಲೇ ಅಳವಡಿಸಿರುವ ಹಾಗೂ ಸರ್ವದೇವರುಗಳನ್ನೂ ಒಂದೇ ಮೂರ್ತಿಯಲ್ಲಿ ವೈಭವದಿಂದ ಕಲಾಕೃತಿಗೊಳಿಸಿದ ಶ್ರೀ ಸತ್ಯನಾರಾಯಣರಿಗೆ ಧನ್ಯವಾದಗಳು ಹಾಗೂ ತ್ರಿವರ್ಣಚಿತ್ರದಲ್ಲಿ ಇದನ್ನು ಭಾವುಕರಿಗೆ ನೀಡಿದ ಸಪ್ತಗಿರಿಗೆ ಋಣಿಯಾಗಿದ್ದೇನೆ.

ಭೀಮರಾವ್ ಮಾಕಾಪುರ, ಗುಲ್ಬರ್ಗ.

ಸ್ವಾಮಿ;

ತಮ್ಮಲ್ಲಿಂದ ಹೊರಡುತ್ತಿರುವ ಸಪ್ತಗಿರಿ ಮಾಸಪತ್ರಿಗೆ ಬಹಳ ಸ್ವಾರಸ್ಯವಾಗಿದೆ. ಸನಾತನ ಧರ್ಮವನ್ನು ಪ್ರಸಾರಮಾಡುವ ಉತ್ತಮ ಕೃತಿಯಾದ ಇದನ್ನು ಈಗ ೬–೭ ತಿಂಗಳಿನಿಂದ ತಪ್ಪದೇ ಓಡುತ್ತಿದ್ದೇನೆ. ಆದರೆ ಅದು ಪ್ರತಿತಿಂಗಳೂ ಸಕಾಲಕ್ಕೆ ಬರುತ್ತಿಲ್ಲ. ದಯವಿಟ್ಟು ಪ್ರತಿ ತಿಂಗಳೂ ಆದಷ್ಟು ಬೇಗ ಎಂದರೆ ಆಯಾ ತಿಂಗಳ ಮೊದಲೇ ಬರುವಂತೆ ಏರ್ಪಾಡು ಮಾಡಲು ತಿಳಿಸ ಬಯಸುತ್ತೇನೆ.

ನ. ಸಾ. ಸೂರ್ಯನಾರಾಯಣಯ್ಯ ಆನಂದಪುರ

ಸ್ವಾಮಿ;

ಜುಲೈ 84 ರ ಸಪ್ತಗಿರಿಯಲ್ಲಿ ಚೋಳದೇಶದ ದಿವ್ಯದೇಶಗಳು ಪ್ರಕಟಿಸಿದಂತೆ ಕರ್ನಾಟಕ ಕ್ಷೇತ್ರಗಳು, ಕರ್ನಾಟಕ ರಾಜರುಗಳು, ಕರ್ನಾಟಕ ಶಿಲ್ಪಕಲೆ, ಕರ್ನಾಟಕ ವೈಭವ, ಈ ತೆರನಾಗಿ ಲೇಖನಗಳನ್ನು ಒಂದೊಂದಾಗಿ ಪ್ರಕಟಿಸೋಣವಾಗಲಿ. ಕರ್ನಾಟಕದಲ್ಲಿ ಸಪ್ತಗಿರಿ ಅಗ್ರಗಣ್ಯ ಸ್ಥಾನ ಪಡೆಯುವದರಲ್ಲಿ ಸಂದೇಹವಿಲ್ಲ. ತಿರುಮಲೆ–ತಿರುಪತಿ ದೇವಸ್ಥಾನಗಳ ಪ್ರತಿನಿತ್ಯದ ಕಾರ್ಯಕ್ರಮಗಳು ಪ್ರತಿ ತಿಂಗಳೂ ಒಂದೊಂದು ಪ್ರಕಟಿಸುವುದು ಒಳ್ಳೆಯದು.

ವೆಂಕಟೇಶ ಶಿವಾಜಿ ಝುಂಗಾಡೆ ಮುದ್ದೇಬಿಹಾಳ.

ಮಾನ್ಯರೆ;

ಕಳೆದ ಐದು ವರ್ಷಗಳಿಂದ ಸಪ್ತಗಿರಿಯನ್ನು ಓದುತ್ತಿದ್ದೇನೆ. ಹಾಗಾಗಿ ಕೆಲ ಅನ್ನಿಸಿಕೆಗಳನ್ನು ಇಲ್ಲಿ ಪಟ್ಟಿ ಮಾಡಬಯಸುತ್ತೇನೆ.

1) ವರ್ಷಕ್ಕೆ ಒಮ್ಮೆ ಸಪ್ತಗಿರಿಯ ವಿಶೇಷಾಂಕ ಪ್ರಕಟಿಸಿರಿ.
2) ಪ್ರತಿತಿಂಗಳೂ ಸಪ್ತಗಿರಿ ನಿಯತಕಾಲಕ್ಕೆ ಓದುಗರ ಕೈಸೇರಲಿ
3) ಹದಿನೈದನೆಯ ವರ್ಷದಲ್ಲಿ ನಡೆಯುತ್ತಿರುವ ಸಪ್ತಗಿರಿ ಹೆಚ್ಚು ಪ್ರಸಾರಹೊಂದಲಿ.

ಬಿ. ತಿಮ್ಮರಾಜು ಶಿವಮೊಗ್ಗ

---

ಸಂದರ್ಶಿಸಿ ಆನಂದಿಸಿ

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು

### ನವರಾತ್ರಿ ಬ್ರಹ್ಮೋತ್ಸವಗಳು

**ದಿನಾಂಕ 25-9-84 ರಿಂದ 4-10-84 ವರೆಗೆ ನಡೆಯುತ್ತವೆ.**

ದಿನವೂ ಸಂಜೆ ಸಂಗೀತ, ಹರಿಕಥೆ ಇತ್ಯಾದಿ ಸಾಂಸ್ಕೃತಿಕ ಕಾರ್ಯಕ್ರಮಗಳು. ಬೆಂಗಳೂರಿನ ಶ್ರೀ ಓ. ಜಿ. ರಾಜುಲು ಅವರ ವತಿಯಿಂದ ಏರ್ಪಡಿಸಲಾಗುವುದು.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ





**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**




**ಸಂಪುಟ ೧೫]  ಸೆಪ್ಟಂಬರ್ ೧೯೮೮  [ಸಂಚಿಕೆ ೪**


# ವಿಷಯಸೂಚಿ



ರಕ್ಷಾಪತ್ರ ಚಿತ್ರಗಳು :

ಮುಖಪುಟ : ತಿರುಮಲೆಯಲ್ಲಿ ಬ್ರಹ್ಮೋತ್ಸವದ ರಥೋತ್ಸವ.

ಹಿಂಬದಿಯಲ್ಲಿ : ಗರುಡೋತ್ಸವ.

ಒಳಪುಟಗಳಲ್ಲಿ : ದೊಡ್ಡ ಶೇಷವಾಹನ ಹಾಗೂ ಸೂರ್ಯಪ್ರಭ ವಾಹನ.




ಆಪತ್ತಿನಲ್ಲಿದ್ದೇವೆ. ಆತಂಕದಿಂದಿದ್ದೇವೆ. ಒದ್ದಾಡುತ್ತಲಿದ್ದೇವೆ. ಕೈಹಿಡಿದೆತ್ತಿದನೆಂದೋ ಅಡ್ಡಬಿದ್ದು ಆರೈಕೆ ಮಾಡಿದನೆಂದೋ, ನಮ್ಮನ್ನುದ್ಧರಿಸಲು ಬಂದ ನರರೂಪ ನಾರಾಯಣನೆಂದೋ ಭಾವಿಸಿ ಮಾತನಾಡುತ್ತೇವೆ. ಸಾಧ್ಯವಾದರೆ ನಮ್ಮ ಚರ್ಮದಿಂದ ಚಪ್ಪಲಿ ಹೊಲೆಸುವುದೆಂದುಕೊಳ್ಳುತ್ತೇವೆ. ಆ ಆತ್ಮೀಯತೆಯಲ್ಲಿನ ಆಂತರ್ಯ ಅಂತಹದು. ಆ ಕೃತಜ್ಞತೆಯಲ್ಲಿನ ವಿಜ್ಞತೆ ಅಂತಹದು.

ಸಮಾಜಕ್ಕೂ ಸಹ ಇಂತಹ ಆತಂಕ ವಿಪತ್ತುಗಳು ಏರ್ಪಡುತ್ತಿರುತ್ತವೆ. ತರಲೆಗಳು, ತಸ್ಕರರು, ತಲೆತಿರುಕರು, ಸಮಾಜಕ್ಕೆ ಆಗಿಂದಾಗ್ಗೆ ಪ್ರಮಾದವನ್ನುಂಟು ಮಾಡುತ್ತಿರುತ್ತಾರೆ. ಅತ್ಯಾಚಾರಿಗಳು ಹಲವರಾದರೆ ಅಪಮಾರ್ಗ ಪ್ರವರ್ತಕರು ಹಲವರು. ಕೈಗೆಟುಕದೆ ಸಮುದ್ರದಲ್ಲಿ ಅಡಗುವವರು ಕೆಲವರಾದರೆ ತನಗಿಂತಲೂ ಇತರ ದೇವರಾರು ಎಂದು ದಂಡಿಸುವವರು ಕೆಲವರು. ಹೀಗೆ ಸಮಾಜದಲ್ಲಿ ಸಂಕ್ಷೋಭೆ ಹೆಚ್ಚಿದಾಗ ಒಬ್ಬಾನೊಬ್ಬ ಮಹಿಮಾನ್ವಿತನು ನಮ್ಮ ಮುಂದೋ, ನಮ್ಮ ನಡುವೆಯೋ ಆವಿರ್ಭವಿಸಿ ಈ ಅತ್ಯಾಚಾರ, ದುರಾಚಾರ, ಅಪಚಾರಗಳಿಗೆ ಮಂಗಳ ಹಾಡಿ ಸಮಾಜದಲ್ಲಿ ಶಾಂತಿಯನ್ನು ಸ್ಥಾಪಿಸುತ್ತಾನೆ. ಹೀಗಾಗಿ ಎಲ್ಲ ಅವತಾರಗಳೂ ದಂಡನಾವತಾರಗಳೇ ಆಗಬೇಕೆಂದಿಲ್ಲ.

ಭಗವಂತನ ಅನೇಕ ಅವತಾರಗಳಲ್ಲಿ ಕಪಿಲ, ಋಷಭ, ಸುಯಜ್ಞಾವತಾರಗಳು ಕೇವಲ ಸಾತ್ವಿಕ. ಜ್ಞಾನ ಬೋಧಾತ್ಮಕ. ವಾಮನಾವತಾರವೂ ಅಷ್ಟೆ. ಇದುವರೆಗೂ ಕೊನೆ ತಿಳಿಯದ ಬುದ್ಧ ಕಲ್ಕ್ಯವತಾರಗಳನ್ನು ಬಿಟ್ಟರೆ ಮಿಕ್ಕವೆಲ್ಲ ದುಷ್ಟ ಶಿಕ್ಷಣ ಶಿಷ್ಟ ರಕ್ಷಣ, ಧರ್ಮಸಂಸ್ಥಾಪನ ಧ್ಯೇಯ ಹೊಂದಿದವೇ. ಪ್ರತಿ ಅವತಾರವನ್ನೂ ವಿಶ್ಲೇಷಿಸಬಲ್ಲೆವಾದರೆ ಕುಯ್ಯಬಲ್ಲವರಿಗೆ ಕುಯ್ಯುವಷ್ಟು ಕುಯಿಲು ಆಗುವುದು.

ಅವತಾರಗಳ ವಿಷಯದಲ್ಲಿ ಮಹಾವಿಷ್ಣುವಿಗೂ ಮಹಾಮಾಯೆಗೂ ಹತ್ತಿರದ ಹೋಲಿಕೆ ಕಂಡು ಬರುತ್ತದೆ. ಇಬ್ಬರಿಗೂ ಅನಂತಾವತಾರಗಳಿದ್ದರೂ, ಅವತಾರ ದಶಕವೇ ಇಬ್ಬರ ವಿಷಯದಲ್ಲೂ ಪ್ರಸಿದ್ಧಿ ಹೊಂದಿದೆ.

ಚತುರ್ಭುಜನಾದ ನಾರಾಯಣನಿಗೂ ಚತುರ್ಭುಜೆಯಾದ ನಾರಾಯಣಿಗೂ ಆದಿತ್ಯ ಮಂಡಲಾಂತರ ಸ್ಥಾಪನ, ಪೂಜನಗಳು ನಿರ್ದೇಶಿಸಲ್ಪಟ್ಟಿವೆ. ನಾರಾಯಣನಿಗೆ ಮಧುಕೈಟಭಾರಿ ಎಂಬ ಹೆಸರಿರುವಂತೆಯೇ ನಾರಾಯಣಿಯನ್ನು ಮಧುಕೈಟಭಪ್ರಶಮನಿ ಎನ್ನುವರು.

ಎಲ್ಲಕ್ಕಿಂತ ವಿಚಿತ್ರವಾದದ್ದು ವರಾಹಾವತಾರ. ಶ್ವೇತವರಾಹ ರೂಪದಲ್ಲಿ ಮಹಾವಿಷ್ಣುವು ಹಿರಣ್ಯಾಕ್ಷನನ್ನು ಕೊಂದು, ಭೂಮಿಯನ್ನು ಉದ್ಧರಿಸಿ, ಭೂವರಾಹ ಮೂರ್ತಿ ಆದದ್ದು ತಿಳಿದೇ ಇದೆ. ದೇವಿಯ ಅವತಾರಗಳಲ್ಲಿ ವಾರಾಹಿ ಒಂದು. ಆಕೆ ಸಹ ಈ ಅವತಾರದಲ್ಲಿ ಭೂಮಿಯನ್ನು ಉದ್ಧರಿಸಿದಂತೆ ದೇವೀ ಭಾಗವತದಲ್ಲಿ ಹೇಳಲಾಗಿದೆ. ಸ್ವಾಮಿ ನರಸಿಂಹಾವತಾರ ಧರಿಸಿದರೆ ಮಂತ್ರಶಾಸ್ತ್ರದಲ್ಲಿ ದೇವಿಗೆ ಸಿಂಹಮುಖಿಯಾದ ಒಂದು ಅವತಾರ. ಕಲ್ಕ್ಯವತಾರದಲ್ಲಿ ವಿಷ್ಣುವು ಅಶ್ವವಾಹನನಾಗಿದ್ದರೆ, ದೇವಿಗೂ ನೀಲಾಶ್ವವಿದ್ದಂತೆ ಇದೆ.

ಮೊದಲಿಗೆ ಬರುವ ನಾರಾಯಣನ ಲೀಲಾವಿನೋದಗಳನ್ನು ವಿವರಿಸುವುದು ಭಾಗವತ. ದೇವ್ಯವತಾರ ಚರಿತ್ರೆಯನ್ನು ವರ್ಣಿಸುವುದೂ ಸಹ ಭಾಗವತವೆಂದೇ ಇರುವುದು ಕಾಕತಾಳೀಯವಲ್ಲವೇನೊ.

ಅಷ್ಟೆಲ್ಲ ಏಕೆ, ಈ ಶೇಷಗಿರಿಯ ಶಿಖರದಲ್ಲಿರುವವ ಕೋನೇಟಿರಾಯನೆಂದೂ, ಅಲ್ಲ ಬೆಟ್ಟದೊಡೆಯನ ಪುತ್ರಿಯೆಂದೂ, ಇವರಿಬ್ಬರೂ ಅಲ್ಲವೆಂದೂ ನಾವು ವಾದ ಮಾಡುತ್ತಿದ್ದರೂ ಈ ಸ್ವಾಮಿ ಬ್ರಹ್ಮೋತ್ಸವ ಆ ದೇವಿ ದಶರಾತ್ರಿಯೊಂದಿಗೆ ಮೇಳವಿಸಿ ಬಂದು ನಮ್ಮನ್ನು ಕರುಣಿಸುತ್ತಿವೆ. ನಾವು ತತ್ಕಾಲಿಕವಾಗಿ ತೃಪ್ತರಾಗುತ್ತಿದೇವೆ.

ಸೂರ್ಯನೊಬ್ಬನೇ ಬಿಂದುವಾಗಿ ಒಂದೆಡೆ, ಚಕ್ರವಾಗಿ ಮತ್ತೊಂದೆಡೆ. ಅಂದು ಕೊಳ್ಳುವುದೇ ಹೊರತು ಅಜ್ಞಾನದಿಂದ ಅದು ಹಾಗೇ ಮುಂದುವರೆಯುತ್ತಿದೆ.

ಏಕಂ ಸತ್ ವಿಪ್ರಾ ಬಹುಧಾ ವದಂತಿ

# ತಿರುವರಂಗತ್ತಮುದನಾರ್

ಪ್ರತಿಯೊಬ್ಬ ಮಹಾವ್ಯಕ್ತಿಯ ಜೀವಿತ ಕಾಲದಲ್ಲಿಯೂ ಆತನನ್ನು ಕುರಿತಾದ ಸಮಕಾಲೀನ ಜೀವನಚರಿತ್ರೆಗೆ ಬಹಳಷ್ಟು ಮಹತ್ವವಿರುತ್ತದೆ. ವಿದೇಶೀಯರಲ್ಲಿ ಈ ತರಹದ ಬರಹಗಳು ಹೆಚ್ಚು ರೂಢಿಯಲ್ಲಿದ್ದರೂ, ಭಾರತದಲ್ಲಿ ಇಂತಹ ವಿಶಿಷ್ಟತೆ ಬಹಳ ಕಡಿಮೆ. ಹೀಗಾಗಿ ಮಹಾ ವ್ಯಕ್ತಿಗಳ ಸಮಕಾಲೀನ ಚರಿತ್ರೆ ನಮಗೆ ತಿಳಿದುಬರದೆ ಇತಿಹಾಸ ನಿರ್ಮಾಣಕ್ಕೆ ಅಡ್ಡಿಯುಂಟಾಗಿದೆ. ಹಾಗೆ ದೊರೆಯುವ ಒಂದೆರಡು ಗ್ರಂಥಗಳಲ್ಲೂ ಬಹಳಷ್ಟು ಉತ್ಪ್ರೇಕ್ಷೆಗಳಿದ್ದು ಇತಿಹಾಸಜ್ಞನು ಯಾವುದನ್ನು ಆರಿಸಿಕೊಳ್ಳಬೇಕುವೆಯು, ಯಾವುದನ್ನು ಬಿಡಬೇಕೆನ್ನುವ ಸಂದಿಗ್ಧದಲ್ಲಿ ಮುಳುಗಿಬಿಡುತ್ತಾನೆ. ಧಾರ್ಮಿಕ ಸಾಹಿತ್ಯಕ್ಕಂತೂ ಇದು ನೂರಕ್ಕೆ ನೂರುಸತ್ಯ. ಅದೃಷ್ಟವಶಾತ್ ಶ್ರೀರಾಮಾನುಜರ ಜೀವಿತ ಕಾಲದಲ್ಲಿ ಇಂತಹ ಒಂದು ಗ್ರಂಥ ರಚಿತವಾಗಿದ್ದು ಭೌತಿಕವಾಗಿ ಅಲ್ಲವಾದರೂ ತಾತ್ತ್ವಿಕವಾಗಿ, ಪಾರಮಾರ್ಥಿಕವಾಗಿ ರಾಮಾನುಜರ ಗುಣ, ಹಿರಿಮೆ, ವಿದ್ಯಾ ಪ್ರೌಢಿಮೆಗಳ ಬಗ್ಗೆ ತಕ್ಕಮಟ್ಟಿನ ವಿವರಗಳನ್ನು ನೀಡುವ 'ರಾಮಾನುಜನೂತ್ತಂದಾದಿ' ಎಂಬ ಕೃತಿ ನಮ್ಮ ಮಧ್ಯೆ ಇದೆ. ಇದನ್ನು 'ತಿರುವರಂಗತ್ತಮುದನಾರ್' ಎಂಬ ಮಹನೀಯರು ರಚಿಸಿದ್ದಾರೆ.

ಅಮುದನಾರ್‌ರವರು ರಾಮಾನುಜರ ಸಮಕಾಲೀನರೇ ಆದರೂ ಅವರ ಶಿಷ್ಯ ಪರಂಪರೆಯಲ್ಲಿ ಬಹಳ ಮುಖ್ಯವಾದ ಸ್ಥಾನ ಪಡೆದಿದ್ದರು. ವಿಶಿಷ್ಟಾದ್ವೈತ ತತ್ತ್ವದ ಹೃದಯವಾದ 'ಶರಣಾಗತಿ', 'ಪ್ರಪತ್ತಿ' ಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ತಮ್ಮ ಜೀವನವೇ ಆ ತತ್ತ್ವದ ಪ್ರತೀಕವೊ ಎನ್ನುವಂತೆ ನಡೆದುಕೊಂಡರು

ಇವರ ಜೀವನದ ಬಗೆಗೆ ಅಷ್ಟೊಂದು ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಅಮುದನಾರ್‌ರವರ ಮೊದಲ ಹೆಸರು 'ಪೆರಿಯಕೋಯಿಲ್ ನಂಬಿ'. ಇವರು ಮೂಂಗಿಲ್ ವಂಶದಲ್ಲಿ ಹುಟ್ಟಿದವರು. ಇವರ ತಂದೆ ತಾಯಿಗಳ ಬಗ್ಗೆ ಹೆಚ್ಚಿನ ವಿವರಗಳು ತಿಳಿದು ಬರದೆ ಇದ್ದರೂ, ಒಳ್ಳೇ ವಂಶದಲ್ಲಿ ಹುಟ್ಟಿ ವಿದ್ಯಾಸಂಪನ್ನರಾಗಿದ್ದು ಧನವಂತರಾಗಿದ್ದರೆಂದು ಹೇಳಬಹುದು. ಇವರು ಶ್ರೀರಂಗದಲ್ಲಿಯೇ ಹುಟ್ಟಿ ಬೆಳೆದವರಾದ್ದರಿಂದ ಇವರ ಹೆಸರಿನ ಹಿಂದೆ ತಿರುವರಂಗಂ ಎಂಬ ವಿಶೇಷಣವನ್ನು ಸೇರಿಸಿದ್ದಿರಬಹುದು. ಇವರು ಶ್ರೀರಂಗದ ರಂಗನಾಥಸ್ವಾಮಿ ದೇವಾಲಯದ ಪ್ರಧಾನ ಅರ್ಚಕರಾಗಿದ್ದರು. ಬಹುಶಃ ಇದು ವಂಶಪಾರಂಪರ್ಯವಾಗಿ ಇವರಿಗೆ ಬಂದಿದ್ದಿರಬಹುದು.

ಯಾಮುನಾಚಾರ್ಯರ ಮರಣಾನಂತರ ಅವರ ಶಿಷ್ಯಕೋಟಿಯ ಕೋರಿಕೆ ಹಾಗೂ ಆಹ್ವಾನದ ಮೇರೆಗೆ ಶ್ರೀವೈಷ್ಣವ ಗೋಷ್ಠಿಯ ಮುಖ್ಯಸ್ಥರಾಗಲು ರಾಮಾನುಜರು ಶ್ರೀರಂಗಕ್ಕೆ ಬಂದರು. ಯಾಮುನಾಚಾರ್ಯರ ಪಂಚಅಂಗಗಳಾದ ಹಾಗೂ ಅವರ ಪ್ರಮುಖ ಶಿಷ್ಯರಾದ ಕಾಂಚೀಪೂರ್ಣ, ಮಹಾಪೂರ್ಣ, ಗೋಷ್ಠೀಪೂರ್ಣ, ಮಾಲಾಧರ ಹಾಗೂ ವರರಂಗರ ಮುಖಾಂತರ ರಾಮಾನುಜರನ್ನು ವೇದವೇದಾಂಗಗಳಲ್ಲಿ ಸಕಲ ಶಾಸ್ತ್ರಗಳಲ್ಲಿ ಪಾರಂಗತರನ್ನಾಗಿ ಮಾಡಲಾಯಿತು. ಯಾಮುನಾಚಾರ್ಯರಲ್ಲಿ ಹುದುಗಿದ್ದ ವಿಶಿಷ್ಟಾದ್ವೈತದ ಮೂಲಸೂತ್ರಗಳೆಲ್ಲವನ್ನೂ ಅವರಿಗೆ ಧಾರೆ ಎರೆಯುವುದರ ಮೂಲಕ ರಾಮಾನುಜರನ್ನು ಎರಡನೆ ಯಾಮುನಾಚಾರ್ಯರೇನೊ ಎನ್ನುವಂತೆ ಮಾಡಿದರು. ಇದರಿಂದ ರಾಮಾನುಜರು ಶ್ರೀರಂಗನಾಥನೊಂದಿಗೆ ಮುಖಾಮುಖಿ ಮಾತಾಡುವಂತಹ ಅತಿಮಾನುಷ ಶಕ್ತಿಯನ್ನು ಪಡೆದರು ಆದುದರಿಂದ ಅವರನ್ನು 'ಉಭಯ ವಿಭೂತಿಪತಿ' ಎಂದು ಕರೆದರು.

ಒಮ್ಮೆ ಯಾಮುನಾಚಾರ್ಯರ ಶಿಷ್ಯರೂ ಹಾಗೂ ರಾಮಾನುಜರೂ ಮಹಾವಿಷ್ಣುವಿನ ಸೇನಾಧಿಪತಿಯಾದ ವಿಷ್ವಕ್ಸೇನರ ವಿಗ್ರಹದ ನೇತೃತ್ವದಲ್ಲಿ ಮೆರವಣಿಗೆಯಲ್ಲಿ ಹೊರಟರು. ಶ್ರೀರಂಗನಾಥ ದೇವಾಲಯದ ಪ್ರಾಕಾರಗಳನ್ನು ದಾಟಿ ಮಧ್ಯದಲ್ಲಿನ ಪ್ರಧಾನ ಕೋಯಿಲ್‌ಗೆ ಬಂದರು. ಅಲ್ಲಿ ಪೆರಿಯಾಳ್ವಾರವರ 'ತಿರುಪ್ಪಲ್ಲಾಂಡ'ನ್ನು ಹಾಗೂ ಯಾಮುನಾಚಾರ್ಯರ ಸಂಸ್ಕೃತ ಸ್ತೋತ್ರವಾದ 'ಸ್ತೋತ್ರರತ್ನ' ದಿಂದ ಎರಡು ಶ್ಲೋಕಗಳನ್ನೂ ಅವರು ಪಠಿಸಿದರು. ಆಗ ಶ್ರೀರಂಗನಾಥನ ಆಜ್ಞೆಯು ಅಶರೀರವಾಕ್ಕಿನ ರೂಪದಲ್ಲಿ ಹೊರಬಂದಿತು.

ನಿಮಗೆ ಹಾಗೂ ನಿಮ್ಮ ಶಿಷ್ಯಕೋಟಿಗೆ ನಾವು ನಮ್ಮ ಕ್ಷೇತ್ರದ ಎರಡೂ ಐಶ್ವರ್ಯಗಳನ್ನು (ಉಭಯ ವಿಭೂತಿ – ಐಶ್ವರ್ಯ) ನೀಡುತ್ತಿದ್ದೇವೆ. ಇಲ್ಲಿನ ಎಲ್ಲ ವ್ಯವಸ್ಥೆಗಳನ್ನೂ ಪರೀಕ್ಷಿಸಿದ ಮೇಲೆ, ನಮ್ಮ ಮನೆಯ (ದೇವಾಲಯದ) ಕೆಲಸಕಾರ್ಯಗಳನ್ನು ನೀವೇ ನಿರ್ವಹಿಸುವುದು.

ಕೂಡಲೆ ರಾಮಾನುಜರು ಪೆರಿಯನಂಬಿಯವರಕಡೆ ತಿರುಗಿ, ನಮ್ಮಾಳ್ವಾರ್‌ರವರ 'ತಿರುವಾಯ್ಮೊಳಿ'ಯ ಪಾಶುರವೊಂದನ್ನು ಹೇಳುತ್ತಾ,

"ಈ ಗೌರವ ತಮ್ಮಂತಹ ಗುರುಗಳಿಂದ ಲಭ್ಯವಾದದ್ದು", ಎಂದು ನಮ್ರತೆಯಿಂದ ತಿಳಿಸಿದರು.

ಇದಕ್ಕೆ ಉತ್ತರವಾಗಿ ಪೆರಿಯ ನಂಬಿಯವರು 'ತಿರುವಾಯ್ಮೊಳಿ'ಯಿಂದ ಮತ್ತೊಂದು

ಶ್ರೀಮತಿ ಬಿ. ಎಸ್. ವಿಜಯಮ್ಮ

ಸಾಲನ್ನು ಹೇಳಿದರು. 'ಈ ಕಲಿ (ಕೆಟ್ಟ) ಕಾಲವು ನಾಶವಾಗುವುದನ್ನು ರಾಮಾನುಜರು ಕಾಣುವರು' ಎಂದರು. ಆ ಭವಿಷ್ಯ ಈಗ ಕೈಗೂಡಿರುವುದರಿಂದ, ಶ್ರೀ ರಂಗನಾಥ ಸ್ವಾಮಿಯ ಅಪ್ಪಣೆಯಂತೆ ಏನು ಬೇಕೋ ಅದನ್ನು ಮಾಡಿಕೊಳ್ಳುವಂತೆ ಹೇಳಿದರು.

ಅಲ್ಲಿ ನೆರೆದಿದ್ದವರೆಲ್ಲರೂ ಗರುಡಮಂಟಪಕ್ಕೆ ಬಂದರು. ರಾಮಾನುಜಾಚಾರ್ಯರು ಎಲ್ಲವನ್ನೂ ಪರೀಕ್ಷಿಸಿದರು. ದವಸಧಾನ್ಯ, ಹೂವಿನಹಾರಗಳನ್ನು ಯಾವ ರೀತಿಯಲ್ಲಿ ದೇವಾಲಯಕ್ಕೆ ಒದಗಿಸುತ್ತಿರುವರು ಎಂಬುದನ್ನು ತಿಳಿದುಕೊಂಡರು. ನಂತರ ಪಕ್ಕದ ಹಳ್ಳಿಯ ಮುಖಂಡನಾದ ಅಕಲಂಗ ನಟ್ಟಿಲ್ಪನ್ ಎಂಬ ಬ್ರಾಹ್ಮಣೇತರನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು. ಅವನನ್ನು ಪ್ರತಿದಿನದ ಮತ್ತು ಕಾಲಕ್ಕೆ ಸರಿಯಾಗಿ ನಡೆಯುವ ದೇವತಾ ಕಾರ್ಯಗಳ ಮೇಲ್ವಿಚಾರಕನನ್ನಾಗಿ ನೇಮಿಸಿಕೊಂಡರು.

ಶ್ರೀರಂಗದ ದೇವಸ್ಥಾನದ 'ಕೋಯಿಲ್ ಒಳುಗು' ಎಂಬ ದಾಖಲೆಯಿಂದ ರಾಮಾನುಜಾಚಾರ್ಯರು ದೇವಸ್ಥಾನದ ಎಲ್ಲಾ ಕಾರ್ಯಗಳನ್ನೂ ಮೊದಲಿನಂತೆಯೇ ನಡೆಸಿಕೊಂಡು ಹೋಗುತ್ತಿದ್ದರೆಂದು ತಿಳಿಯುತ್ತದೆ. ಈ ಒಂದು ಕಾರ್ಯವನ್ನು ಸಂಪ್ರದಾಯಕ್ಕೆ ಅನುಗುಣವಾಗಿಯೂ ಮತ್ತು ಪ್ರಾಮಾಣಿಕವಾಗಿಯೂ ನಡೆಸುತ್ತಿದ್ದರು. ಇದಕ್ಕಾಗಿ ಕೆಲವು ದೇವಸ್ಥಾನದ ಪರಿವಾರದವರನ್ನು ಬದಲಾಯಿಸಿ ಕೆಲವರನ್ನು ದೇವಸ್ಥಾನದ ಆಧಿಪತ್ಯದಿಂದ ತೆಗೆದು ಹಾಕಿದರು. ಇದರಿಂದಾಗಿ ಕಾಂಚೀಪುರದ ಸುತ್ತಲೂ ವಾಸವಾಗಿದ್ದ ರಾಮಾನುಜಾಚಾರ್ಯರ ಪಂಗಡದ ಕೆಲವು ಬ್ರಾಹ್ಮಣರುಗಳು ಅಧಿಕಾರಕ್ಕೆ ಬಂದರು. ಇದು ಕೆಲವರಿಗೆ ಸರಿಯಾಗಲಿಲ್ಲ. ದೇವಸ್ಥಾನದ ದಾಖಲೆಗಳಿಂದಲೂ, ಕಥೆಗಳಿಂದಲೂ ತಿಳಿಯುವುದೇನೆಂದರೆ ದೇವಸ್ಥಾನದ ಅರ್ಚಕರುಗಳು ರಾಮಾನುಜರಿಗೆ ವಿಷ ಹಾಕಲು ಪ್ರಯತ್ನಿಸಿದರು ಎಂದು.

(36 ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೧೬ ನೆಯ ಅಧ್ಯಾಯ

# ಒಳ್ಳೆ ಮತ್ತು ಕೆಟ್ಟ ಸ್ವಭಾವ

ಶ್ರೀಭಗವಾನುವಾಚ–

ಅಭಯಂ ಸತ್ತ್ವಸಂಶುದ್ಧಿಃ
ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ
ಸ್ವಾಧ್ಯಾಯಸ್ತಪ ಆರ್ಜವಮ್ ॥ 1

ಅಹಿಂಸಾ ಸತ್ಯಮಕ್ರೋಧಃ
ತ್ಯಾಗಃ ಶಾಂತಿರಪೈಶುನಮ್ ।
ದಯಾ ಭೂತೇಷ್ವಲೋಲತ್ವಂ
ಮಾರ್ದವಂ ಹ್ರೀರಚಾಪಲಮ್ ॥ 2

ತೇಜಃ ಕ್ಷಮಾ ಧೃತಿಃ ಶೌಚಂ
ಅದ್ರೋಹೋ ನಾತಿಮಾನಿತಾ ।
ಭವಂತಿ ಸಂಪದಂ ದೈವೀಂ
ಅಭಿಜಾತಸ್ಯ ಭಾರತ ॥ 3

ಶ್ರೀಕೃಷ್ಣ : ಅಂಜುಬುರುಕುತನವಿಲ್ಲದಿರುವುದು. ಶುದ್ಧವಾದ ಮನಸ್ಸಿನಿಂದ ನಡೆಯುವುದು, ಜ್ಞಾನವನ್ನು ಅನುಭವಕ್ಕೆ ತಂದುಕೊಳ್ಳುವ ನಿಷ್ಠೆ, ದಾನ, ಇಂದ್ರಿಯಗಳನ್ನು ಬಿಗಿ ಹಿಡಿಯುವುದು, ಯಜ್ಞ, ವೇದಾಧ್ಯಯನ ಮಾಡುವುದು, ತಪಸ್ಸು, ಸರಳತನ, ಯಾರನ್ನೂ ಪೀಡಿಸದಿರುವುದು, ನಿಜವನ್ನಾಡುವುದು, ಸಿಟ್ಟಿಲ್ಲದಿರುವುದು, ವಿಷಯದ ಮೇಲಿನ ಆಸಕ್ತಿಯನ್ನು ಬಿಡುವುದು, ಮನಸ್ಸಿನ ಸಮಾಧಾನ, ಚಾಡಿ ಹೇಳದಿರುವುದು, ಪ್ರಾಣಿಗಳಲ್ಲಿ ದಯೆ, ಚಪಲ ಇಲ್ಲದಿರುವುದು. ಕ್ರೂರತನ ಇಲ್ಲದಿರುವುದು, ನಾಚಿಕೆ. ಚಪಲತನವಿಲ್ಲದಿರುವುದು, ತೇಜಸ್ವಿತೆ, ಸೈರಣೆ, ದೃಢನಿಶ್ಚಯ, ಶುಚಿಯಾಗಿರುವುದು, ಇತರರಿಗೆರಡೆಣಿಸದಿರುವುದು, ಹೆಮ್ಮೆ ಇಲ್ಲದಿರುವುದು – ಇವು ಅರ್ಜುನ, ದೇವತೆಗಳಲ್ಲಿರುವುದಕ್ಕೆ ಯೋಗ್ಯವಾದ ಒಳ್ಳೆ ಸಂಸ್ಕಾರಗಳಿಂದ ಹುಟ್ಟಿದವನಿಗೆ ಉಂಟಾಗುತ್ತವೆ.

ದಂಭೋ ದರ್ಪೋಽಭಿಮಾನಶ್ಚ
ಕ್ರೋಧಃ ಪಾರುಷ್ಯಮೇವ ಚ ।
ಅಜ್ಞಾನಂ ಚಾಭಿಜಾತಸ್ಯ
ಪಾರ್ಥ ಸಂಪದಮಾಸುರೀಮ್ ॥ 4

ಅರ್ಜುನ, ತನ್ನಲ್ಲಿಲ್ಲದ ಒಳ್ಳೆತನವನ್ನು ತೋರಿಸಿಕೊಳ್ಳುವುದು, ಸೊಕ್ಕು, ಹೆಮ್ಮೆ, ಸಿಟ್ಟು, ಮನಸ್ಸು ನೋಯಿಸುವ ಮಾತನ್ನಾಡುವುದು, ತಿಳಿಗೇಡಿತನ – ಇವೆಲ್ಲ ಆಸುರರಿಗೊಪ್ಪುವ ಕೆಟ್ಟ ಸಂಸ್ಕಾರಗಳಿಂದ ಹುಟ್ಟಿದವನಿಗೆ ಉಂಟಾಗುತ್ತವೆ.

ದೈವೀ ಸಂಪದ್ವಿಮೋಕ್ಷಾಯ
ನಿಬಂಧಾಯಾಸುರೀ ಮತಾ ।
ಮಾ ಶುಚಃ ಸಂಪದಂ ದೈವೀಂ
ಅಭಿಜಾತೋಽಸಿ ಪಾಂಡವ ॥ 5

ಒಳ್ಳೆ ಸಂಸ್ಕಾರಗಳು ಸಂಸಾರದ ಬಿಡುಗಡೆಗೂ, ಕೆಟ್ಟ ಸಂಸ್ಕಾರಗಳು ಕಟ್ಟಿಗೊಳಗಾಗುವುದಕ್ಕೂ ಕಾರಣಗಳೆಂದು ಗೊತ್ತಾಗಿರುವುವು, ಅರ್ಜುನ ವ್ಯಸನಪಡಬೇಡ; ನೀನು ಒಳ್ಳೆ ಸಂಸ್ಕಾರ ಪಡೆದು ಹುಟ್ಟಿರುವೆ.

ದ್ವೌ ಭೂತಸರ್ಗೌ ಲೋಕೇಽಸ್ಮಿನ್
ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ
ಆಸುರಂ ಪಾರ್ಥ ಮೇ ಶ್ರುಣು ॥ 6

ಈ ಲೋಕದಲ್ಲಿ ಮನುಷ್ಯರ ಸೃಷ್ಟಿ ದೈವ ಆಸುರ ಎಂದು ಎರಡು ಬಗೆ, ಅರ್ಜುನ, ದೈವೀ ಸೃಷ್ಟಿಯ



ಬಗೆಗೆ ವಿಸ್ತಾರವಾಗಿ ಹೇಳಿದ್ದಾಯಿತು. ಇನ್ನು ಆಸುರಸ್ವಭಾವದ ಸ್ವಭಾವಸೃಷ್ಟಿಯ ಬಗೆಗೆ ಕೇಳು

ಪ್ರವೃತ್ತಿಂ ಚ ನಿವೃತ್ತಿಂ ಚ
ಜನಾ ನ ವಿದುರಾಸುರಾಃ ।
ನ ಶೌಚಂ ನಾಪಿ ಚಾಽಚಾರೋ
ನ ಸತ್ಯಂ ತೇಷು ವಿದ್ಯತೇ ॥ 7

ಮಾಡಬೇಕಾದದ್ದು ಯಾವುದೆಂಬುದನ್ನೂ ಬಿಡಬೇಕಾದದ್ದು ಯಾವುದೆಂಬುದನ್ನೂ ಆಸುರ ಸ್ವಭಾವದ ಜನರು ತಿಳಿಯುವುದಿಲ್ಲ. ಅವರಲ್ಲಿ ನೈರ್ಮಲ್ಯ ಇಲ್ಲ, ಒಳ್ಳೆ ಆಚಾರವೂ ಇಲ್ಲ; ನಿಜ ಹೇಳಬೇಕೆಂಬ ನಿಷ್ಠೆಯೂ ಇಲ್ಲ

ಅಸತ್ಯಮಪ್ರತಿಷ್ಠಂ ತೇ
ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ
ಕಿಮನ್ಯತ್ ಕಾಮಹೈತುಕಮ್ ॥ 8

ಅವರು ಜಗತ್ತನ್ನು ಸುಳ್ಳಿನ ಕಂತೆಯೆಂದೂ ಇದಕ್ಕೆ ಆಸರೆಯಾಗಿ ಧರ್ಮವಾಗಲಿ ದೇವರಾಗಲಿ ಇಲ್ಲವೆಂದೂ, ಇದು ಯಾವ ಕ್ರಮಕ್ಕೂ ಒಳಪಟ್ಟಿಲ್ಲವೆಂದೂ, ಇದು ಕಾಮದ ಸ್ವಚ್ಛಂದ ಸೃಷ್ಟಿಯೆಂದೂ ಹೇಳುವರು.

ಏತಾಂ ದೃಷ್ಟಿಮವಷ್ಟಭ್ಯ
ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ
ಕ್ಷಯಾಯ ಜಗತೋಽಹಿತಾಃ ॥ 9

ಈ ದೃಷ್ಟಿಯನ್ನು ಅವಲಂಬಿಸಿ ವಿವೇಕವನ್ನು ಹಾಳುಮಾಡಿಕೊಂಡು ಕೀಳು ಬುದ್ಧಿಯವರಾಗಿ ಇತರರಿಗೆ ಹಾನಿಯನ್ನು ಮಾಡುತ್ತ ಜಗತ್ತು ಹಾಳಾಗುವಂಥ ಕ್ರೂರ ಕರ್ಮವನ್ನು ಮಾಡುವವರಾಗಿ ಹುಟ್ಟುತ್ತಾರೆ

ಕಾಮಮಾಶ್ರಿತ್ಯ ದುಷ್ಪೂರಂ
ದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್
ಪ್ರವರ್ತಂತೇಽಶುಚಿವ್ರತಾಃ ॥ 10

ಎಂದಿಗೂ ಸಾಕೆನಿಸದಂಥ ಬಯಕೆಯನ್ನು ಅವಲಂಬಿಸಿ, ದಂಭ, ಮಾನ, ಮದ ಇವುಗಳಿಂದ ಕೂಡಿ ಅವಿವೇಕದಿಂದ ಕೆಟ್ಟ ನಿಶ್ಚಯಗಳನ್ನು ಮಾಡಿಕೊಂಡು ಅಶುಚಿಯಾದ ಆಚಾರವನ್ನು ಹಿಡಿದು ಮುಂದುವರಿಯುತ್ತಾರೆ.

ಚಿಂತಾಮಪರಿಮೇಯಾಂ ಚ
ಪ್ರಲಯಾಂತಾಮುಪಾಶ್ರಿತಾಃ ।

ಕಾಮೋಪಭೋಗಪರಮಾಃ
ಏತಾವದಿತಿ ನಿಶ್ಚಿತಾಃ ॥ 11

ಅವರು ಸಾಯುವವರೆಗೂ ತಪ್ಪದಂಥ ಮತ್ತು ಕೊನೆಮೊದಲಿಲ್ಲದಂಥ ಚಿಂತೆಯನ್ನು ಹಚ್ಚಿ ಕೊಂಡು ವಿಷಯಸುಖವೇ ಹೆಚ್ಚೆಂದೂ ಇದರ ಹೊರತು ಬೇರೆ ಇಲ್ಲವೆಂದೂ ಗೊತ್ತು ಮಾಡಿ ಕೊಂಡು ಇರುವರು.

ಆಶಾಪಾಶಶತೈರ್ಬದ್ಧಾಃ
ಕಾಮಕ್ರೋಧ ಪರಾಯಣಾಃ ।
ಈಹಂತೇ ಕಾಮಭೋಗಾರ್ಥಂ
ಅನ್ಯಾಯೇನಾರ್ಥಸಂಚಯಾನ್ ॥ 12

ಅವರು ನೂರಾರು ಬಯಕೆಗಳೆಂಬ ಹಗ್ಗಗಳಿಂದ ಕಟ್ಟಿಸಿಕೊಂಡವರಾಗಿ ಕೆಟ್ಟ ಬಯಕೆ, ಸಿಟ್ಟು ಮೊದ ಲಾದುವುಗಳನ್ನು ಆಶ್ರಯಿಸಿ ಕೇವಲ ಕಾಮದ ಸುಖಕ್ಕಾಗಿ, ಅನ್ಯಾಯದ ದಾರಿಯಿಂದ ದುಡ್ಡಿನ ರಾಶಿ ಕೂಡಿಡುತ್ತಾರೆ.

ಇದಮದ್ಯ ಮಯಾ ಲಬ್ಧಂ
ಇಮಂ ಪ್ರಾಪ್ಸ್ಯೇ ಮನೋರಥಮ್ ।
ಇದಮಸ್ತೀದಮಪಿ ಮೇ
ಭವಿಷ್ಯತಿ ಪುನರ್ಧನಮ್ ॥ 13

ಅಸೌ ಮಯಾ ಹತಃ ಶತ್ರುಃ
ಹನಿಷ್ಯೇ ಚಾಪರಾನಪಿ ।
ಈಶ್ವರೋಽಹಮಹಂ ಭೋಗೀ
ಸಿದ್ಧೋಽಹಂ ಬಲವಾನ್ ಸುಖೀ ॥ 14

ಆಢ್ಯೋಽಭಿಜನವಾನಸ್ಮಿ
ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ
ಇತ್ಯಜ್ಞಾನವಿಮೋಹಿತಾಃ ॥ 15

ಇದು ಈಗ ನನಗೆ ದೊರೆಯಿತು; ಈ ಇಷ್ಟಾರ್ಥ ವನ್ನು ಪಡೆಯುತ್ತೇನೆ; ಇದು ಇದೆ; ಮತ್ತೆ ಈ ಹಣವೂ ನನಗೆ ದೊರೆಯುತ್ತದೆ.

ಈ ಹಗೆಯನ್ನು ನಾನು ಕೊಂದೆನು; ಉಳಿ ದವರನ್ನು ಕೊಲ್ಲುವೆನು; ನಾನು ಒಡೆಯನು; ನಾನು ಸುಖ ಸಾಧನಗಳನ್ನುಳ್ಳವನು; ನಾನು ಸಿದ್ಧನು; ಬಲಿಷ್ಠನು; ಸುಖಿ; ನಾನು ಹಣಗಾರ ನಾನು ಒಳ್ಳೆ ಕುಲದವನು; ನನಗೆ ಸಮಾನರು ಬೇರೆ ಯಾರಿದ್ದಾರೆ? ನಾನು ಯಾಗ ಮಾಡು ತ್ತೇನೆ; ದಾನಮಾಡುತ್ತೇನೆ; ಆನಂದ ಪಡುತ್ತೇನೆ ಎಂದೆಲ್ಲ ತಿಳಿದುಕೊಂಡ ತಲೆತಿರುಕರಾಗಿರುತ್ತಾರೆ.

ಅನೇಕಚಿತ್ತವಿಭ್ರಾಂತಾಃ
ಮೋಹಜಾಲ ಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು
ಪತಂತಿ ನರಕೇಽಶುಚೌ ॥ 16

ಅವರು ಕೆಟ್ಟ ಸಂಕಲ್ಪಗಳಿಂದ ಭ್ರಾಂತರಾಗಿ ಮೋಹದ ಬಲೆಯಲ್ಲಿ ಸಿಕ್ಕಿ ವಿಷಯಸುಖದಲ್ಲಿ ಹೆಚ್ಚು ಆಸಕ್ತಿಯನ್ನು ಹೊಂದಿ ಹೊಲಸಾದ ನರಕದಲ್ಲಿ ಬೀಳುತ್ತಾರೆ:

ಆತ್ಮಸಂಭಾವಿತಾಃ ಸ್ತಬ್ಧಾಃ
ಧನಮಾನಮದಾನ್ವಿತಾಃ ।
ಯಜಂತೇ ನಾಮ ಯಜ್ಞೈಸ್ತೇ
ದಂಭೇನಾಽವಿಧಿಪೂರ್ವಕಮ್ ॥ 17

ತಾವೇ ದೊಡ್ಡವರೆಂದು ತಿಳಿದು ಎದೆಯನ್ನು ಬ್ಬಿಸಿಕೊಂಡು ಹಣಗಾರರೆಂಬ ಮಾನದಿಂದಲೂ ಮದದಿಂದಲೂ ಕೂಡಿ ಅವರು ನಿಯಮಗಳನ್ನು ಗಮನಿಸದೆ ಇತರಿಗೆ ತಮ್ಮ ದೊಡ್ಡಸ್ತಿಕೆಯನ್ನು ಪ್ರದರ್ಶಿಸುವುದಕ್ಕಾಗಿ ಮಾತ್ರ ಹೆಸರಿಗೆ ತಕ್ಕ ಯಜ್ಞ ಯಾಗಾದಿಗಳನ್ನು ಮಾಡುತ್ತಾರೆ.

ಅಹಂಕಾರಂ ಬಲಂ ದರ್ಪಂ
ಕಾಮಂ ಕ್ರೋಧಂ ಚ ಸಂಶ್ರಿತಾಃ ।
ಮಾಮಾತ್ಮ ಪರದೇಹೇಷು
ಪ್ರದ್ವಿಷಂತೋಽಭ್ಯಸೂಯಕಾಃ ॥ 18

ಅಹಂಕಾರ, ಬಲಾತ್ಕಾರ, ಸೊಕ್ಕು, ಕೆಟ್ಟ ಬಯಕೆ ಮತ್ತು ಸಿಟ್ಟನ್ನು ಮೈಗೂಡಿಸಿಕೊಂಡು ತಮ್ಮ ದೇಹದಲ್ಲಿಯೂ ಎಲ್ಲರ ದೇಹದಲ್ಲಿಯೂ ಇರುವ ನನ್ನ ಮೇಲೆ ಹಗೆತನವನ್ನು ಮಾಡುತ್ತಾ ಇತರರ ಮೇಲೆ ಹೊಟ್ಟೆಕಿಚ್ಚು ಪಡುತ್ತಿರುವರು.

ತಾನಹಂ ದ್ವಿಷತಃ ಕ್ರೂರಾನ್
ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರ ಮಶುಭಾನ್
ಆಸುರೀಷ್ವೇವ ಯೋನಿಷು ॥ 19

ನನ್ನನ್ನು ಕಂಡರೆ ಆಗದೆ ಕಲ್ಲು ಮನಸ್ಸಿನಿಂದ ಕೆಲಸನ್ನು ಮಾಡುವ ಆ ನೀಚರನ್ನು ನಾನು ಯಾವಾಗಲೂ ಸಂಸಾರದಲ್ಲಿ ಕೆಟ್ಟ ಸ್ವಭಾವದ ಬಸಿರಿಗೇ ತಳ್ಳುವೆನು.

ಆಸುರೀಂ ಯೋನಿಮಾಪನ್ನಾಃ
ಮೂಢಾ ಜನ್ಮನಿಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ
ತತೋ ಯಾಂತ್ಯಧಮಾಂ ಗತಿಮ್ ॥ 20

ಅರ್ಜುನ, ಕೆಟ್ಟ ಸ್ವಭಾವದ ಬಸಿರನ್ನು ಹೊಕ್ಕು ಅವಿವೇಕಿಗಳು ಪ್ರತಿ ಹುಟ್ಟಿನಲ್ಲಿಯೂ ನನ್ನನ್ನು ಹೊಂದದೆಯೆ ಇನ್ನಷ್ಟು, ಕೀಳಾದ ಜನ್ಮಕ್ಕೆ ಹೋಗುತ್ತಾರೆ.

ತ್ರಿವಿಧಂ ನರಕಸ್ಯೇದಂ
ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧ ಸ್ತಥಾ ಲೋಭಃ
ತಸ್ಮಾದೇತತ್ರಯಂ ತ್ಯಜೇತ್ ॥ 21

ಬಯಕೆ, ಸಿಟ್ಟು, ಜಿಪುಣತನ ಇವು ಮೂರು ಆತ್ಮ ನಾಶಕ್ಕೆ ದಾರಿ, ನರಕದ ಬಾಗಿಲು. ಆದುದರಿಂದ ಈ ಮೂರನ್ನು ಬಿಡಬೇಕು.

ಏತೈರ್ವಿಮುಕ್ತಃ ಕೌಂತೇಯ
ತಮೋದ್ವಾರೈ ಸ್ತ್ರಿಭಿರ್ನರಃ ।
ಆಚರತ್ಯಾತ್ಮನಃ ಶ್ರೇಯಃ
ತತೋ ಯಾತಿ ಪರಾಂ ಗತಿಮ್ ॥ 22

ಅರ್ಜುನ, ಈ ನರಕದ ಬಾಗಿಲುಗಳಾದ ಮೂರ ರಿಂದ ಬಿಡುಗಡೆಯನ್ನು ಹೊಂದಿದ ಮನುಷ್ಯನು ತನ್ನ ಉನ್ನತಿಯನ್ನು ಮಾಡಿಕೊಳ್ಳುತ್ತಾನೆ, ಆದರಿಂದ ಉತ್ಕೃಷ್ಟವಾದ ಮೋಕ್ಷವನ್ನು ಹೊಂದುತ್ತಾನೆ.

ಯಃ ಶಾಸ್ತ್ರವಿಧಿಮುತ್ಸೃಜ್ಯ
ವರ್ತತೇ ಕಾಮಕಾರತಃ ।
ನ ಸ ಸಿದ್ಧಿ ಮವಾಪ್ನೋತಿ
ನ ಸುಖಂ ನ ಪರಾಂ ಗತಿಮ್ ॥ 23

ಯಾವನು ಶಾಸ್ತ್ರದ ನಿಯಮವನ್ನು ಕಡೆಗಂಡು ತನ್ನ ಮನಸ್ಸು ಬಂದಂತೆ ನಡೆಯುವನೋ ಅವನು ಮೋಕ್ಷಕ್ಕೆ ತಕ್ಕ ಯೋಗ್ಯತೆಯನ್ನು ಪಡೆಯುವು ದಿಲ್ಲ. ಅವನಿಗೆ ಈ ಲೋಕದ ಸುಖವೂ ಇಲ್ಲ; ಮೋಕ್ಷವೂ ಇಲ್ಲ.

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ
ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ
ಕರ್ಮ ಕರ್ತು ಮಿಹಾರ್ಹಸಿ ॥ 24

ಆದುದರಿಂದ ಯಾವುದನ್ನು ಮಾಡಬೇಕೆಂಬ ಮತ್ತು ಯಾವುದನ್ನು ಬಿಡಬೇಕೆಂಬ ವಿಷಯ ದಲ್ಲಿ ನಿನಗೆ ಶಾಸ್ತ್ರವೇ ಪ್ರಮಾಣ. ಶಾಸ್ತ್ರದಲ್ಲಿ ಹೇಳಿರುವುದನ್ನು ತಿಳಿದು ಈ ಲೋಕದಲ್ಲಿ ನಿನ್ನ ಧರ್ಮವನ್ನು ನೀನು ಮಾಡುವವನಾಗು.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾ ಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ ॥

16 ನೆಯ ಅಧ್ಯಾಯವು ಮುಗಿದುದು.

★

# ಸ್ತೋತ್ರ ಗ್ರಂಥಗಳು

ಸಂಸ್ಕೃತ ವಾಙ್ಮಯದಲ್ಲಿ ಸ್ತೋತ್ರ ಸಾಹಿತ್ಯಕ್ಕೆ ಪ್ರಮುಖಸ್ಥಾನವಿದೆ. ಇದು ಭಕ್ತಿಯುತವೂ, ಬೋಧಪ್ರದವೂ ಆಗಿದೆ. ಸಾಮಾನ್ಯವಾಗಿ ಸ್ತೋತ್ರಗಳನ್ನು ನಿತ್ಯವೂ ಪಾರಾಯಣ ಮಾಡುವುದು ವಾಡಿಕೆಯಾಗಿದೆ. ದಿವ್ಯ ದೇಶಗಳಲ್ಲಿ ಆರಾಧಿಸಲ್ಪಡುತ್ತಿರುವ ಅರ್ಚಾಮೂರ್ತಿಗಳ ಪರವಾಗಿ ಅನೇಕ ಸ್ತೋತ್ರಗಳಿವೆ. ಕೆಲವು ಸ್ತೋತ್ರಗಳು ವೇದಾಂತ ತತ್ತ್ವವನ್ನು ಪ್ರತಿಪಾದಿಸುತ್ತವೆ. ಎಲ್ಲ ಮತಾಚಾರ್ಯರೂ ಇಂತಹ ದಿವ್ಯಸ್ತೋತ್ರಗಳನ್ನು ರಚಿಸಿದ್ದಾರೆ. ಅವೆಲ್ಲ ಜನಪ್ರಿಯವಾಗಿವೆ. ಶಂಕರಾಚಾರ್ಯರ 'ಲಕ್ಷ್ಮೀನರಸಿಂಹ ಮಮದೇಹಿ ಕರಾವಲಂಬಂ' ಎಂಬ ಸ್ತೋತ್ರವನ್ನು ಬಹು ಸಂಖ್ಯಾತ ಜನರು ಪಠಿಸುವರು. ಹಾಗೆಯೇ ಮಧುರಾಷ್ಟಕದ 'ಅಧರಂ ಮಧುರಂ ಹೃದಯಂ ಮಧುರಂ ನಯನಂ ಮಧುರಂ ಹಸಿತಂ ಮಧುರಂ— ಗಮನಂ ಮಧುರಂ ಮಧುರಾಧಿಪತೇ ರಖಿಲಂ ಮಧುರಂ' ಎಂಬ ಸ್ತೋತ್ರವನ್ನು ಹಾಡದವರಾರು? ಯಾಮುನಾಚಾರ್ಯರ ಆಳವಂದಾರ್ ಸ್ತೋತ್ರವು ಸ್ತೋತ್ರರತ್ನವೆಂದೇ ಪ್ರಸಿದ್ಧಿಯಾಗಿದೆ. ಇಂತಹ ಸ್ತೋತ್ರಗಳು ವಿಶೇಷ ಲಕ್ಷಣಗಳಿಂದ ಕೂಡಿ ಪಾಂಡಿತ್ಯಪೂರ್ಣವಾಗಿರುವುದಲ್ಲದೆ, ಪ್ರತಿಭಾನ್ವಿತ ಗೀತರೂಪಕಗಳಾಗಿವೆ. ಇವು ದಾಸ ಸಾಹಿತ್ಯ, ವಚನ ಸಾಹಿತ್ಯಗಳ ಹಾಗೆ ಬಹುಜನಪ್ರಿಯವಾಗಿವೆ.

ಪ್ರಕೃತ ಕವಿಸಾರ್ವಭೌಮರೆಂದು ಪ್ರಸಿದ್ಧರಾದ ವೇದಾಂತ ದೇಶಿಕರು ರಚಿಸಿರುವ ಕೆಲವು ಸ್ತೋತ್ರಗಳನ್ನು ಈ ಲೇಖನದಲ್ಲಿ ವಿಚಾರಮಾಡಲಾಗುವುದು. ಶ್ರೀವೈಷ್ಣವ ಪ್ರಪಂಚದಲ್ಲಿ ಈ ಸ್ತೋತ್ರಗಳು ಪ್ರಚಾರದಲ್ಲಿವೆ. ಇದಕ್ಕೆ ಕಾರಣ, ಆಚಾರ್ಯರು ದಿವ್ಯದೇಶಗಳಲ್ಲಿ ಪ್ರತಿಷ್ಠಿತವಾದ ಅರ್ಚಾಮೂರ್ತಿಗಳನ್ನು ದರ್ಶನಮಾಡಿ, ಆಯಾಯಾ ದಿವ್ಯಮಂಗಳ ವಿಗ್ರಹಗಳ ಮಹಿಮೆ, ಮತ್ತು ವೈಭವಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ವೇದಾಂತದೇಶಿಕರು ಪರಮ ವೇದಾಂತಿಗಳು, ವೈರಾಗ್ಯನಿಷ್ಠರು, ಏಕನಿಷ್ಠೆಯಿಂದ ಪರಮಾತ್ಮನನ್ನು ಆಶ್ರಯಿಸಿ ಸ್ವಾಮಿಯ ಸೇವೆಗಾಗಿಯೇ ತಮ್ಮ ಇಡೀ ಜೀವನವನ್ನು ಮುಡಿಪಾಗಿಟ್ಟವರು. ಅಸಂಖ್ಯಾತಜನರಿಗೆ ಭಕ್ತಿ ಪ್ರಪತ್ತಿ, ಮಾರ್ಗವನ್ನು ತೋರಿಸಿಕೊಟ್ಟ ಮಹಾತ್ಮರು. ವಿದ್ಯೆಗೆ, ವಿವೇಕಕ್ಕೆ, ವಿರಕ್ತಿಗೆ, ಗುಣಸಂಪತ್ತಿಗೆ, ದಯಾದಾಕ್ಷಿಣ್ಯಕ್ಕೆ, ಆದರ್ಶರಾದ ಭಾಗವತೋತ್ತಮರು. ವಿದ್ಯಾಪ್ರಧಾನ ದೇವರಾದ ಶ್ರೀ ಲಕ್ಷ್ಮೀಹಯಗ್ರೀವ ಸ್ವಾಮಿಯನ್ನು ಸಾಕ್ಷಾತ್ಕರಿಸಿ, ಅವನ ದಿವ್ಯಕಟಾಕ್ಷಕ್ಕೆ ಪಾತ್ರರಾದವರು. ಅವರು ಸ್ಮರಿಸದ ಅರ್ಚಾಮೂರ್ತಿಗಳಿಲ್ಲ. ಸಾಕ್ಷಾತ್ಕರಿಸದ ಪರಮಾತ್ಮನ ದಿವ್ಯ ಮಂಗಳ ವಿಗ್ರಹಗಳಿಲ್ಲ, ಸಾಧು ಸಂತರಿಗೆ ಅವರು ಆದರ್ಶಪ್ರಾಯರು. ತಾವು ದರ್ಶನಮಾಡಿದ ಎಲ್ಲ ದಿವ್ಯದೇಶಗಳ ಅರ್ಚಾಮೂರ್ತಿಗಳ ಮಹಿಮೆ, ವೈಭವಗಳನ್ನು ಕುರಿತು ಬಹು ಚೆನ್ನಾಗಿ ಅನುಭವ ಪೂರಿತವಾಗಿ ವರ್ಣಿಸಿದ್ದಾರೆ. ಅವೆಲ್ಲ ಬಹು ಸೊಗಸಾಗಿವೆ. ಅವರು ಮೂವತ್ತಾರು ಸ್ತೋತ್ರಗಳನ್ನು ರಚಿಸಿದ್ದಾರೆ. ಅವುಗಳೆಲ್ಲ ಇಂದೂ ಪಾರಾಯಣ ಮಾಡಲ್ಪಡುತ್ತಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಇಲ್ಲಿ ಪರಿಚಯ ಮಾಡಿಕೊಡಲಾಗುವುದು. ಕೆಲವು ಸ್ತೋತ್ರಗಳ ಹೆಸರು ಹೀಗಿವೆ.

ಶ್ರೀ ಡಿ. ಕೃಷ್ಣ ಅಯ್ಯಂಗಾರ್

ಹಯಗ್ರೀವ ಸ್ತೋತ್ರ, ದಶಾವತಾರ ಸ್ತೋತ್ರ ದೇವನಾಯಕ ಪಂಚಾಶತ್, ಭಗವದ್ಧ್ಯಾನ ಸೋಪಾನ, ಗೋಪಾಲವಿಂಶತಿ, ಶ್ರೀಸ್ತುತಿ, ಭೂಸ್ತುತಿ, ಗೋದಾಸ್ತುತಿ, ವೇಗಾಸೇತು ಸ್ತೋತ್ರ, ಅಷ್ಟಭುಜಾಷ್ಟಕ, ಪರಮಾತ್ಮಸ್ತುತಿ, ಶರಣಾಗತಿ ದೀಪಿಕೆ, ಅಚ್ಯುತ ಶತಕ, ದೇಹಳೀಶಸ್ತುತಿ, ನ್ಯಾಸತಿಲಕ, ನ್ಯಾಸದಶಕ, ಸುದರ್ಶನಾಷ್ಟಕ, ಗರುಡದಂಡಕ, ಗರುಡ ಪಂಚಾಶತ್, ದಿವ್ಯದೇಶಮಂಗಳಾಶಾಸನ, ಸುಭಾಷಿತ ನೀವಿ, ದಯಾಶತಕ – ಇತ್ಯಾದಿ.

ಹಯಗ್ರೀವ ಸ್ತೋತ್ರವು ಆಚಾರ್ಯರ ಪ್ರಥಮ ರಚನೆ. ಜ್ಞಾನಾನಂದಪರಿಪೂರ್ಣನೂ ಸಕಲ ತೇಜೋರೂಪನೂ, ವೇದಪ್ರತಿಪಾದ್ಯನೂ ಆದ ಹಯಗ್ರೀವ ಸ್ವಾಮಿಯ ಪ್ರಾರ್ಥನಾರೂಪವಾದ ದಿವ್ಯತಮಸ್ತೋತ್ರ ಇದು. ಯಾವ ದಿವ್ಯಕ್ಷೇತ್ರದಲ್ಲಿ ಅವರು ಧ್ಯಾನಕ್ಕೆ ಕುಳಿತು. ಪ್ರಾರ್ಥಿಸಿ, ಸ್ಮರಿಸಿ, ಶ್ಲೋಕರೂಪವಾಗಿ ಈ ಸ್ತೋತ್ರವನ್ನು ಹಾಡಿದರೋ, ಅಂತಹ ಹಯಗ್ರೀವಸ್ವಾಮಿಯ ದೇವಸ್ಥಾನವನ್ನು ನಾವು ಇಂದೂ ತಿರುವಹೀಂದ್ರಪುರದಲ್ಲಿ ಕಾಣಬಹುದು. ಹಯಗ್ರೀವ ಮಂತ್ರ ರಹಸ್ಯವನ್ನು ಇಲ್ಲಿ ನಿರೂಪಿಸಲಾಗಿದೆ. ಇದು ಬಹು ಜನಪ್ರಿಯವಾದ ಸ್ತೋತ್ರ. ಇದಕ್ಕೆ ಪಂಡಿತರು ವ್ಯಾಖ್ಯಾನ ಬರೆದಿದ್ದಾರೆ, ಇದರ ಶ್ಲೋಕದ ಅರ್ಥ ಹೀಗಿದೆ.

"ಬಲಗೈಯಲ್ಲಿ ಚಕ್ರವನ್ನೂ, ಎಡಗೈಯಲ್ಲಿ ಶಂಖವನ್ನೂ, ಇನ್ನೊಂದು ಬಲಗೈಯಲ್ಲಿ ಉಪದೇಶ ಮುದ್ರೆಯನ್ನೂ ಮತ್ತೊಂದು ಎಡಗೈಯಲ್ಲಿ ಪುಸ್ತಕವನ್ನೂ ಧರಿಸಿ, ಆಗತಾನೆ ಸಾಣೆ ಹಿಡಿದ ಸ್ಫಟಿಕಮಣಿಯ ಭಾಗದಂತೆ ಸ್ವಚ್ಛ ಬಿಳಿದಾವರೆಯ ಸಿಂಹಾಸನದಲ್ಲಿ ಕುಳಿತಿರುವ ಲಕ್ಷ್ಮೀ ಹಯಗ್ರೀವಸ್ವಾಮಿಯ ದಿವ್ಯ ಮಂಗಳ ಮೂರ್ತಿಯು ನನ್ನ ಮನಸ್ಸಿನಲ್ಲಿ ಸದಾ ನೆಲೆಸಿರಲಿ!!



ಭಗವದ್ಧ್ಯಾನಸೋಪಾನವು ಹನ್ನೆರಡು ಶ್ಲೋಕಗಳ ಭಾವಗೀತೆ. ಸೌಂದರ್ಯಮಯನಾದ ರಂಗನಾಥ ಸ್ವಾಮಿಯ ದಿವ್ಯ ಸನ್ನಿಧಾನದಲ್ಲಿ ಅನನ್ಯ ಭಕ್ತಿಯಿಂದ ಹೊರಹೊಮ್ಮಿದ ದಿವ್ಯಭಾವನೆಯನ್ನು ಈ ಸ್ತೋತ್ರವು ತೋರಿಸುತ್ತದೆ. ಸ್ವಾಮಿಯ ದಿವ್ಯಮಂಗಳ ವಿಗ್ರಹದ ಪ್ರತಿಯೊಂದು ಅವಯವದ ಸೌಂದರ್ಯವನ್ನು ವಿವರಿಸಿ ಹಾಡಿದ ಪ್ರಾರ್ಥನೆ ಇದು. ಶ್ರೀರಂಗದ ರಂಗನಾಥನ ಮುಂಭಾಗದಲ್ಲಿ ರಚಿತವಾದುದು. ಪರಮಾತ್ಮನನ್ನು ಪಡೆಯಲು ಹತ್ತು ಮೆಟ್ಟಿಲುಗಳೋಪಾದಿಯಲ್ಲಿ ಇದರ ಹತ್ತು ಶ್ಲೋಕಗಳಿವೆ. ಬಹು ಅರ್ಥಗರ್ಭಿತವಾಗಿವೆ. ಆಚಾರ್ಯರು ರಚಿಸಿರುವ ದಯಾಶತಕವು ಶ್ರೀನಿವಾಸದಶಕ ಎಂದು ಹೇಗೆ ಪ್ರಸಿದ್ಧವಾಗಿದೆಯೋ ಹಾಗೆಯೆ ಭಗವದ್ಧ್ಯಾನ ಸೋಪಾನವು ಶ್ರೀರಂಗನಾಥಸೋಪಾನ ಎಂದು ಹೆಸರುವಾಸಿಯಾಗಿದೆ. ವಿದ್ವಾಂಸರು ಇದಕ್ಕೆ ಸಂಸ್ಕೃತ ತಮಿಳು ವ್ಯಾಖ್ಯಾನಗಳನ್ನು ರಚಿಸಿದ್ದಾರೆ.

ವೇದಾಂತ ದೇಶಿಕರು ಶ್ರೀರಂಗನಾಥಸ್ವಾಮಿಯನ್ನು ದರ್ಶನಮಾಡಿದಾಗ ಕ್ರಮವಾಗಿ ಅವರ ಜ್ಞಾನ ದೃಷ್ಟಿಯು ಪರಮಾತ್ಮನ ದಿವ್ಯಕಾಂತಿಯ ನೋಟದಿಂದ ಕರ್ಷಣ ಹೊಂದಿತು. ಸ್ವಾಮಿಯ ದಿವ್ಯ ಜ್ಯೋತಿಯು ಒಂದುಸಲ ಹೊಳೆದಂತೆ ಭಾಸವಾಯಿತು. ಇನ್ನೊಂದುಸಲ ಹೆಚ್ಚು ಪ್ರಕಾಶಮಾನವಾಗಿ ಕಪ್ಪಾಗಿರುವಂತೆ ಕಂಡಿತು. ಸ್ವಾಮಿಯ ಚೆಲುವು ಬಹು ಆಕರ್ಷಕವಾಗಿತ್ತು. ಸರ್ವೋತ್ತಮವಾದ ರತ್ನದಂತೆ ಸ್ವಾಮಿಯು ಪ್ರಕಾಶಿಸಿದನು. ಆಚಾರ್ಯರಿಗೆ ಪರಮಾತ್ಮನು ಜ್ಯೋತಿಗಳಲ್ಲಿ ದಿವ್ಯ ಜ್ಯೋತಿಯಂತೆಯೂ ಹೊಳೆಯುವ ಕಣ್ಣುಗಳ ಕಣ್ಣಿನಂತೆಯೂ ಕಂಡನು. ಮೊದಲನೆಯ ಶ್ಲೋಕದಲ್ಲಿ ಸ್ವಾಮಿಯ ಮಹಿಮೆಯನ್ನು ಅವರು ಹೀಗೆ ಪ್ರಾರ್ಥಿಸಿದ್ದಾರೆ.

ಸಮಾಧಿಯಲ್ಲಿ ನಿರತರಾಗಿರುವ ಯೋಗಿಗಳಿಗೆ ಹೃದಯಾಂಗಮವಾದ ದಿವ್ಯತೇಜೋಮೂರ್ತಿಯಾಗಿದ್ದಾನೆ. ಅವರ ಯೋಗ ದೃಷ್ಟಿಗೆ ಅಂಜನದಂತೆ ಸಹಕಾರಿಯಾಗಿದ್ದಾನೆ. ಧ್ಯಾನಕ್ಕೆ ಲಕ್ಷ್ಯ ಮತ್ತೂ ನಿರ್ವಾಹಕ. ಧರ್ಮಾರ್ಥಕಾಮಗಳೆಂಬ ಸಾಮಾನ್ಯ ಪುರುಷಾರ್ಥಗಳಿಗೂ ಮೋಕ್ಷವೆಂಬ ಉತ್ತಮ ಪುರುಷಾರ್ಥಕ್ಕೂ ಅನುಗುಣವಾಗಿ, ಸುಲಭವಾದ ಚಿಂತಾಮಣಿ ರತ್ನದಂತೆ ಶೋಭಿಸುತ್ತಿದ್ದಾನೆ, ದೀನ ಮತ್ತು ಅನಾಥರ ವ್ಯಸನವನ್ನು ಕ್ಷಾಂತಿಗೊಳಿಸುತ್ತಾ, ವೇದಗಳಿಗೂ ಕಣ್ಣಿನಂತೆ ಆದರಣೀಯನಾಗಿ, ದೇವತೆಗಳಿಗೂ ದೇವತೆಯಾಗಿರುವ ಒಂದು ತೇಜಸ್ಸು ಶ್ರೀರಂಗ ಕ್ಷೇತ್ರದಲ್ಲಿ ಕಣ್ಣಿಗೇ ಕಾಣುವಂತೆ ಬೆಳಗುತ್ತಿದೆ.

ಗೋಪಾಲ ವಿಂಶತಿಸ್ತೋತ್ರವು ಗೋಪಾಲ ಚಕ್ರಯೋಗ ರಹಸ್ಯದ ವಿವರಣೆ. ಇದು ತತ್ತ್ವ ಪರಿಪಾಲನಾಲಕ್ಷಣಗಳಿಂದ ಕೂಡಿದ ಕೃಷ್ಣ ಭಕ್ತಿಯನ್ನು ಪ್ರಚೋದಿಸುವ ದಿವ್ಯಸ್ತೋತ್ರ. ಕವಿವರ್ಯರು ತಮ್ಮ ವಿವಿಧ ಮನೋಭಾವನೆಗಳನ್ನು ವಿವಿಧ ಛಂದಸ್ಸಿನ ಶ್ಲೋಕಗಳಿಂದ ವ್ಯಕ್ತಪಡಿಸಿದ್ದಾರೆ. ಇದರ ಒಂದು ಶ್ಲೋಕ ಹೀಗಿದೆ.

ವ್ಯಾಸೋ ಹೃತ್ವಾ ದಿನಕರಸುತಾ
ಸನ್ನಿಧೌ ಪಲ್ಲವೀನಾಂ
ಲೀಲಾಸ್ಮೇರೋ ಜಯತಿ ಲಲಿತಾ
ಮಾಸ್ಥಿತಃ ಕುಂದಶಾಖಾಂ
ಸವ್ರೀಳಾಭಿ ಪ್ರಥಮ ವಸನೇ
ತಾಭಿ ರಭ್ಯರ್ಥಮಾನೇ
ಕಾಮೀ ಕಶ್ಚಿತ್ ಕರಕಮಲಯೋ
ರಂಜಲಿಂ ಯಾಚಮಾನಃ ॥

ಯಮುನಾ ನದಿಯಲ್ಲಿ ವಿಹರಿಸುತ್ತಿದ್ದ ಗೋಪಯುವತಿಯರು, ದಡದಲ್ಲಿಟ್ಟಿದ್ದ ವಸ್ತ್ರಗಳನ್ನೆಲ್ಲಾ ಅಪಹರಿಸಿಕೊಂಡುಹೋಗಿ ಕುಂದವೃಕ್ಷದ ಕೊಂಬೆಯ ಮೇಲೆ ಇಟ್ಟು, ವಿಲಾಸದಿಂದ ಮಂದಹಾಸ ಮಾಡುತ್ತಿರುವ (ಕೃಷ್ಣನು,) ಅನಂತರ ಲಜ್ಜೆಯಿಂದ ವಸ್ತ್ರವನ್ನು ಬೇಡುತ್ತಿರುವ ಮತ್ತೂ ಎರಡುಕೈಗಳನ್ನೂ ಮುಗಿದು ಪ್ರಾರ್ಥಿಸುತ್ತಿರುವ ಗೋಪಿಯರಿಗೆ, ಕಾಮುಕನಂತೆ ನಟಿಸಿದ ಆ ಕೃಷ್ಣನು ಸರ್ವೋತ್ಕೃಷ್ಟನಾಗಿ ಬೆಳಗಲಿ. ಹೀಗೆಯೇ ಇತರ ಶ್ಲೋಕಗಳೂ ಪಾಂಡಿತ್ಯಪೂರ್ಣವಾಗಿರುವುದಲ್ಲದೆ, ಭಕ್ತಿ ಪ್ರಬೋಧಕಗಳಾಗಿವೆ.

ಶ್ರೀಸ್ತುತಿಯು, ಧ್ಯಾನಕ್ಕೆ ವಿಷಯವಾದ ಮತ್ತೂ ಮನಸ್ಸಿನಿಂದ ತಟ್ಟನೆ ಹೊರ ಹೊಮ್ಮುವ ಅಗೋಚರ ದಿವ್ಯಶಕ್ತಿಯ ವಿಷಯವಾಗಿ ಉಂಟಾಗುವ ಸಂತೋಷಭಾವನೆಯನ್ನು ಅನುಭವಿಸುವ ಸ್ತೋತ್ರ. ಅವರು ಹೀಗೆ ಪ್ರಾರ್ಥಿಸುತ್ತಾರೆ. "ಹೇ! ಲಕ್ಷ್ಮೀದೇವಿಯೆ! ಆ ಬ್ರಹ್ಮಸ್ತಂಭ ಪರ್ಯಂತ ವಿಸ್ತಾರಹೊಂದಿರುವ ಎಲ್ಲಿ ವಾಙ್ಮಯಗಳೂ

(29ನೇ ಪುಟ ನೋಡಿ)

# ಜಗನ್ನಾಥದಾಸರು

ಜಗದೀಶಪದಾಸಕ್ತಂ
ಜಗದಾಮೋದ ಕಾರಣಂ ।
ಜಗತೀತಲವಿಖ್ಯಾತಂ
ಜಗನ್ನಾಥಗುರುಂ ಭಜೇ ॥

ಶ್ರೀ ನರಹರಿತೀರ್ಥರಿಂದ ಬೀಜಾರೋಪಣಗೊಂಡ ದಾಸಸಾಹಿತ್ಯ ವೃಕ್ಷವು ನಂತರ ಬಂದ ಶ್ರೀಪಾದರಾಯರು, ವ್ಯಾಸರಾಜರು, ಪುರಂದರದಾಸರು ಮುಂತಾದ ಅನೇಕ ಪ್ರಮುಖ ಹರಿದಾಸರಿಂದ ಬೆಳೆದು ಹೆಮ್ಮರವಾಗಿ ಅಮೃತಫಲಗಳನ್ನು ನೀಡುತ್ತ ಕಲ್ಪವೃಕ್ಷವೆನಿಸಿದೆ. "ದಾಸಚತುಷ್ಟಯ" ಎಂದು ಪ್ರಸಿದ್ಧಿಗೊಂಡವರಲ್ಲಿ ಪುರಂದರದಾಸರು, ವಿಜಯದಾಸರು, ಗೋಪಾಲದಾಸರಂತೆ ಜಗನ್ನಾಥದಾಸರೂ ಒಬ್ಬರು.

ಪುರಂದರ, ಕನಕಾದಿ ದಾಸಸಾಹಿತ್ಯದ ಪ್ರಥಮ ಘಟ್ಟದ ನಂತರ ಸುಮಾರು 80 ವರ್ಷಗಳ ಕಾಲ ತಟಸ್ಥವಾಗಿದ್ದ ದಾಸ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿ, ಬೆಳೆಸಿ, ಉನ್ನತ ಮಟ್ಟಕ್ಕೆ ತಲುಪಿಸಿದವರೆಂದರೆ ದಾಸಸಾಹಿತ್ಯದ ದ್ವಿತೀಯಘಟ್ಟದ ಮಹಾನುಭಾವರಾದ ವಿಜಯದಾಸರು, ಗೋಪಾಲದಾಸರು ಹಾಗೂ ಜಗನ್ನಾಥ ದಾಸರು. ಹರಿದಾಸಪರಂಪರೆಯಲ್ಲಿ "ಜಗನ್ನಾಥದಾಸ"ರಿಗೆ ತಮ್ಮದೇ ಆದ ವಿಶಿಷ್ಟ ಸ್ಥಾನವಿದೆ.

ರಾಯಚೂರು ಜಿಲ್ಲೆಯ ಮಾನವೀ ತಾಲ್ಲೂಕಿನ ಬ್ಯಾಗವಟ್ಟೆ ಗ್ರಾಮದ ನರಸಿಂಹಾಚಾರ್ಯ-ಲಕ್ಷ್ಮೀಬಾಯಿ ಎಂಬ ದಂಪತಿಗಳಲ್ಲಿ ಕ್ರಿ. ಶ. 1728 (27-7-1728) ರಲ್ಲಿ ಸುಪುತ್ರನೊಬ್ಬ ಜನ್ಮ ತಾಳಿದನು. ಶ್ರೀನಿವಾಸನ ಅನುಗ್ರಹದಿಂದ ಮಗು ಜನಿಸಿದ್ದರಿಂದ ಮಗುವಿಗೆ "ಶ್ರೀನಿವಾಸ" ಎಂದೇ ನಾಮಕರಣವಾಯಿತು.

**ಶ್ರೀ ಗುರುರಾಜ ಗುಡಿ**

ಮಗು ಬೆಳೆದಂತೆ ಅವನ ಅಪೂರ್ವ ಪ್ರತಿಭೆಯನ್ನು ಗುರುತಿಸಿದ ತಂದೆ-ತಾಯಿಗಳು ಆಗಿನ ರಾಘವೇಂದ್ರಮಠದ ಪರಂಪರೆಯ ಯತಿಗಳಾದ ವರದೇಂದ್ರತೀರ್ಥ ಶ್ರೀಪಾದರಲ್ಲಿ ವಿದ್ಯಾಭ್ಯಾಸಕ್ಕೆ ಕಳಿಸಿದರು. "ವರದೇಂದ್ರ ಪಂಚರತ್ನಮಾಲಿಕಾ" ಎಂಬ 5 ಪದ್ಯಗಳನ್ನು ರಚಿಸಿ ಶ್ರೀಗಳಿಗೆ ಅರ್ಪಿಸಿದ ಶ್ರೀನಿವಾಸನ ಪ್ರತಿಭೆ ಗುರುಗಳನ್ನು ಆಕರ್ಷಿಸಿತು. ವರದೇಂದ್ರತೀರ್ಥರು ಪ್ರೀತಿಯಿಂದ ಎಲ್ಲ ವಿದ್ಯೆಯನ್ನು ಶಿಷ್ಯ ಶ್ರೀನಿವಾಸನಿಗೆ ಧಾರೆಯೆರೆದುದಲ್ಲದೆ "ಆಚಾರ್ಯ" ಎಂಬ ಬಿರುದನ್ನಿತ್ತು ಅನುಗ್ರಹಿಸಿದರು. ಹೀಗೆ ಶ್ರೀನಿವಾಸಾಚಾರ್ಯರು ಸುಧಾಂತ ವೇದಾಂತ, ವಾದಾಂತತರ್ಕ, ಮುಂತಾದವನ್ನು ಅಧ್ಯಯನಮಾಡಿ ಗೃಹಸ್ಥಾಶ್ರಮಿಗಳಾಗಿ ಪಾಠ-ಪ್ರವಚನ ನಡೆಸುತ್ತಾ ಮಾನವಿಯಲ್ಲಿ ನೆಲೆಸಿದರು.

ವಿಜಯದಾಸರು ಸಂಚಾರಕ್ರಮೇಣ ಮಾನವಿಗೆ ಬಂದರು. ಶ್ರೀನಿವಾಸಾಚಾರ್ಯರು ತಮ್ಮ ಬಳಿ ಬರದಿದ್ದರೂ ತಾವೇ ಅವರಿದ್ದಲ್ಲಿಗೆ ಹೋಗಿ ತೀರ್ಥಪ್ರಸಾದಕ್ಕೆ ಬರಬೇಕೆಂದು ಆಮಂತ್ರಿಸಿದರು. ಪಾಂಡಿತ್ಯದ ಹೆಮ್ಮೆಯಿಂದ ಬೀಗುತ್ತಿದ್ದ ಶ್ರೀನಿವಾಸಾಚಾರ್ಯರು ಸೊಕ್ಕಿನಿಂದ "ಆಗಲಿ" ಎಂದು ನುಡಿದರು. "ಊಟ ತಡವಾದರೆ ಹೊಟ್ಟೆ ತಡವಾಗುತ್ತದೆ, ಆದ್ದರಿಂದ ತಾವು ಊಟ ಮಾಡಿರುವುದಾಗಿ'' ವಿಜಯದಾಸರಿಗೆ ಹೇಳಿ ಕಳಿಸಿದರು. "ಹಾಗೇ ಆಗಲಿ" ಎಂದರು ವಿಜಯದಾಸರು. ಶ್ರೀನಿವಾಸಾಚಾರ್ಯರಿಗೆ ಎಲ್ಲಿಲ್ಲದ, ನಿಲ್ಲದ ಹೊಟ್ಟೆನೋವು ಪ್ರಾರಂಭವಾಯಿತು. ಸ್ವೋತ್ತಮರ ದ್ರೋಹ ಸುಮ್ಮನೆಯೆ? ತಿರುಪತಿ, ಮಂತ್ರಾಲಯ



ಎಷ್ಟು ಸೇವೆ ಮಾಡಿದರೂ ಉದರಶೂಲೆ ಕಡಿಮೆ ಆಗಲಿಲ್ಲ. ರಾಘವೇಂದ್ರಸ್ವಾಮಿಗಳ ಸ್ವಪ್ನ ಸೂಚನೆಯಂತೆ ವಿಜಯದಾಸರ ಕೃಪಾ ಯಾಚನೆಯೊಂದೇ ಉಳಿದಿರುವ ಮಾರ್ಗ ವೆಂದರಿತು ಶ್ರೀನಿವಾಸಾಚಾರ್ಯರು ವಿಜಯ ದಾಸರಲ್ಲಿಗೆ ಬಂದರು. ಆಗ ವಿಜಯದಾಸರು "ಪ್ರಾರಬ್ಧವಲ್ಲಿದ್ದುದು ಆಗಲೇಬೇಕು, ಗತಂ ನ ಚಿಂತಯೇತ್ ಪ್ರಾಜ್ಞಃ" ಎಂದು ಸಂತೈಸಿ, ಉತ್ತನೂರಿನಲ್ಲಿರುವ ಗೋಪಾಲದಾಸರ ಬಳಿಗೆ ಹೋಗುವಂತೆಯೂ, ಅವರಿಂದಲೇ ಅನುಗ್ರಹವಾಗುವುದೆಂದೂ ಹೇಳಿ ಕಳಿಸಿ ಕೊಟ್ಟರು.

ಗೋಪಾಲದಾಸರು ಶ್ರೀನಿವಾಸಾಚಾರ್ಯರ ಕನಿಕರಸರಿಸ್ಥಿತಿ ಕಂಡು ಒಂದು ರೊಟ್ಟಿಯನ್ನು ಅಭಿಮಂತ್ರಿಸಿ ತಿನ್ನಲು ಕೊಟ್ಟರು. ಎನ್ನ ಬಿನ್ನಪ ಕೇಳೋ । ಧನ್ವಂತ್ರಿ ದಯಮಾಡೋ ಸಣ್ಣವನು ಇವ ಕೇವಲಾ ॥ ಎಂದು ಧನ್ವಂತರಿಯನ್ನು ಪ್ರಾರ್ಥಿಸಿದರು. ಧನ್ವಂತರಿ ಅನುಗ್ರಹ ದಿಂದ ಮತ್ತೆ ಆಚಾರ್ಯರು ನವಚೈತನ್ಯ ದಿಂದ ಕಂಗೊಳಿಸಿದರು.

ಆಯುಷ್ಯ ಮುಗಿದು ಮರಣೋನ್ಮುಖ ರಾಗಿದ್ದ ಶ್ರೀನಿವಾಸಾಚಾರ್ಯರಿಗೆ ಗೋಪಾಲ ದಾಸರು ಗುರ್ವಾಜ್ಞೆಯಂತೆ ತಮ್ಮ ಆಯು ಷ್ಯದ 40 ವರ್ಷಗಳನ್ನು ಧಾರೆ ಎರೆದರು!

ಪಂಢರಪುರಕ್ಕೆ ಹೋಗಿ ಅಲ್ಲಿ ಅಂಕಿತ ಅನುಗ್ರಹ ಪಡೆಯುವಂತೆಯೂ ಆಚಾರ್ಯರಿಗೆ ಗೋಪಾಲದಾಸರು ಸೂಚಿಸಿದರು.

ಗುರುವಿನ ಅಣತಿಯಂತೆ – ಎಂದು ಕಾಂಬೆನು ಪಾಂಡುರಂಗ ಮೂರುತಿಯ । ಇಂದು ಭಾಗನಿವಾಸ ನರನ ಸಾರಥಿಯ– ಎನ್ನುತ್ತ ಪಂಢರಪುರಕ್ಕೆ ಪ್ರಯಾಣ. ಆಚಾ ರ್ಯರು ಚಂದ್ರಭಾಗಾನದಿಯಲ್ಲಿ ಸ್ನಾನ ಮಾಡಿದಾಗ "ಜಗನ್ನಾಥ ವಿಠಲ" ಎಂಬ ಅಂಕಿತದ ಫಲಕವೊಂದು ಅವರಿಗೆ ದೊರ ಕಿತು. ದೈವಪ್ರಸಾದದಿಂದ ಪುಳಕಿತರಾದ ಆಚಾರ್ಯರ ಆ ಕ್ಷಣದ ಅನುಭವ – ಅವರ್ಣ ನೀಯ! ಅಪೂರ್ವ! ದಾಸರಾದ ಆಚಾ ರ್ಯರ ಬಾಯಿಂದ ಹೊರಬಿದ್ದಿತು ಈ ಪದ್ಯ "ತಟಿತ್ಕೋಟಿನಿಭ ಕಾಯೋ ಜಗನ್ನಾಥ ವಿಠಲಯ್ಯಾ, ವಿಠಲಯ್ಯಾ". ಈಗಲೂ ಈ ಪದ್ಯವನ್ನು ಕಂಜರಾ ಮುಂತಾದವನ್ನು ಬಾರಿಸುತ್ತಾ ಹಾಡುತ್ತಾ ಕುಣಿಯುವಾಗ ಆಗುವ ಆನಂದಾನುಭವ ಅಪೂರ್ವ; ಸ್ವಯಂವೇದ್ಯ. ದಾಸರ ಆ ಪೂರ್ವ ಅನುಭವ ನಿಜಕ್ಕೂ ಅಪೂರ್ವವೇ ಸರಿ.

ಜಗನ್ನಾಥದಾಸರು ಇತರ ಹರಿದಾಸರಂತೆ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿದ್ದಾರೆ. 18 ನೇ ಶತಮಾನದ ಶ್ರೇಷ್ಠ ಸಾಹಿತಿಗಳಲ್ಲಿ ಜಗನ್ನಾಥದಾಸರೂ ಒಬ್ಬರು. "ಹರಿಕಥಾಮೃತಸಾರ" "ತತ್ವಸುವಾಲಿ" ಎಂಬ ಉದ್ಗ್ರಂಥಗಳನ್ನು ರಚಿಸಿದ್ದಾರೆ. ಉಪನಿಷತ್, ಪುರಾಣ, ಮುಂತಾದ ಅನೇಕ ಶಾಸ್ತ್ರಸಾರ–ಹರಿಕಥಾಮೃತಸಾರ. ಹರಿ ದಾಸಸಾಹಿತ್ಯದಲ್ಲಿ ಹಿಂದೆಂದೂ, ಮುಂ ದೆಂದೂ ರಚಿತವಾಗದ ಮೇರುಕೃತಿ ಇದಾಗಿದೆ. ಟೀಕೆ, ಟಿಪ್ಪಣಿಗಳಿಲ್ಲದೆ ಇದು ಸಂಪೂರ್ಣ ವಾಗಿ ತಿಳಿಯಲಾರದು. ಇದಕ್ಕೆ ಅನೇಕ ಹರಿದಾಸರು, ಯತಿಗಳು ಟಿಪ್ಪಣಿ ಬರೆ ದಿದ್ದಾರೆ.

ತಮ್ಮ ಸೊಸೆ ಗೋಪಮ್ಮನ ಮನಃಶಾಂ ತಿಗಾಗಿ ರಚಿಸಿದ ಗ್ರಂಥವೇ "ತತ್ವಸುವಾಲಿ" 600 ನುಡಿ ಹೊಂದಿದ ಭಗವದ್ಭಕ್ತಿ ಪ್ರಚೋ ದಕ ತ್ರಿಪದಿ ಕಾವ್ಯವಿದು.

ತಮಗೆ ಅನುಗ್ರಹಿಸಿದ ವಿಜಯದಾಸರು, ರಾಘವೇಂದ್ರಸ್ವಾಮಿಗಳು ಮುಂತಾದ ಹಿರಿ ಯರ ಜೊತೆಗೆ ಆಯುಷ್ಯಧಾರೆ ಎರೆದು ಜ್ಞಾನೋಪದೇಶ ನೀಡಿದ ಗೋಪಾಲದಾಸ ರನ್ನೂ ಭಕ್ತಿಯಿಂದ ( ಗೋಪಾಲದಾಸ ರಾಯಾ ನಿನ್ನಯ ಪಾದ ... ) ಸ್ತುತಿಸಿ ಆತ್ಮಸಮರ್ಪಣ ಮಾಡಿಕೊಂಡಿದ್ದಾರೆ.

ಶ್ರೀ ಜಗನ್ನಾಥದಾಸರು ದಾಸದೀಕ್ಷೆ ( 1770 – 54 ) ಪಡೆದ ನಂತರ 40 ವರ್ಷ, ಒಟ್ಟು (1728–1809) 81 ವರ್ಷಗಳ ಕಾಲ ಅಖಂಡ ಭಕ್ತಿ, ಜ್ಞಾನಯಜ್ಞ ನಿರತರಾಗಿ, ಅನೇಕರಿಗೆ ದಾಸದೀಕ್ಷೆ ನೀಡಿ, ಸುಜನರನ್ನು ಉದ್ಧರಿಸಿ ಕ್ರಿ.ಶ. 1731 ಶುಕ್ಲ ಸಂವತ್ಸರ ಭಾದ್ರಪದ ಶುದ್ಧ ನವಮಿಯಂದು ವಿಷ್ಣು ಸಾನ್ನಿಧ್ಯವನ್ನು ಹೊಂದಿದರು. ಇದೇ ಸೆಪ್ಟಂಬರ್ 4 ರಂದು ಈ ಮಹಾತ್ಮರ ಪುಣ್ಯ ದಿನ. ಶ್ರೀ ಜಗನ್ನಾಥ ದಾಸರು ಎಲ್ಲರಿಗೂ ಭಗವದ್ಭಕ್ತಿ, ಜ್ಞಾನಗಳನ್ನು ಕರುಣಿಸಿ ಅನುಗ್ರಹಿಸಲೆಂದು ಈ ಸಂದರ್ಭದಲ್ಲಿ ಅವ ರನ್ನು ಪ್ರಾರ್ಥಿಸೋಣ.

ದಾಸವರ್ಯಂ ದಯಾಯುಕ್ತಂ
ದೂರೀಕೃತದುರಾಶಿಷಂ ।
ಹರಿಕಥಾಮೃತ ವಕ್ತಾರಂ
ಜಗನ್ನಾಥ ಗುರುಂ ಭಜೇ ॥

★

# ಶ್ರೀಚಕ್ರ

ಪ್ರೊ॥ ಎ. ಪಿ. ಶ್ರೀನಿವಾಸಮೂರ್ತಿ

ಲಲಿತಾ ಪರಮೇಶ್ವರಿಯ ಉಪಾಖ್ಯಾನದಲ್ಲಿ ಶ್ರೀ ಚಕ್ರವು ಲಲಿತಾ ಪರಮೇಶ್ವರಿಯ ಹಾಗೂ ಆಕೆಯ ರಾಜಧಾನಿಯಾದ ಶ್ರೀಪುರದ ಸಂಕೇತ ಚಿತ್ರವಾಗಿದೆ ಎಂದೂ, ಪಂಚದಶಾಕ್ಷರಿ ಮಂತ್ರವು ದೇವಿಯ ಸೂಕ್ಷ್ಮ ಶರೀರವೆಂದೂ ಹೇಳಲಾಗಿದೆ. ಪ್ರಕೃತ ಲೇಖನದಲ್ಲಿ ಶ್ರೀಚಕ್ರ ಸಂಕೇತದ ಮತ್ತು ಪಂಚದಶಾಕ್ಷರಿಯ ಮಹತ್ತ್ವದ ಸಂಕ್ಷಿಪ್ತ ವಿವರಣೆಯಿದೆ.

ಶ್ರೀ ಚಕ್ರದ ರಚನೆಯೇ ಒಂದು ಅತ್ಯಂತ ಭಾವಗರ್ಭಿತವಾದ ವಿಷಯವಾಗಿದೆ. ಆದುದರಿಂದ ಈ ರಚನೆಯನ್ನು, ಅಂದರೆ ಅದು ಹೇಗೆ ಕಾಣುತ್ತದೆ ಎಂಬುದನ್ನು ಚಿತ್ರದಲ್ಲಿ ತೋರಿಸಲಾಗಿದೆ :

ಶ್ರೀಚಕ್ರವು ರೇಖೆಗಳು, ತ್ರಿಕೋಣಗಳು, ವೃತ್ತಗಳು ಹಾಗೂ ದಳಗಳಿಂದ ಕೂಡಿರುವ ಒಂದು ತೊಡಕಾದ ಚಿತ್ರವಾಗಿ ಕಾಣುವುದು ಇದನ್ನು ಸೂಕ್ಷ್ಮವಾಗಿ ದೃಷ್ಟಿಸಿದರೆ ತಂತ್ರ ಭಾಷೆಯಲ್ಲಿ ಒಂದೊಂದನ್ನೂ ಒಂದು ಚಕ್ರ ಎಂದು ಕರೆಯಲಾದ ಕೆಳಗಣ ಒಂಬತ್ತು ಚಿತ್ರಗಳು ಗೋಚರವಾಗುವುವು. ಚಿತ್ರದ ಹೊರ ಭಾಗದಿಂದ ಆರಂಭಿಸಿ ವಿವರಿಸುವುದಾದರೆ ಕ್ರಮವಾಗಿ ಈ ಒಂಬತ್ತು ಭಾಗಗಳ ಸ್ವರೂಪವನ್ನು ಹೀಗೆ ಬಿಡಿಸಿ ಹೇಳಬಹುದು:–

1. ಒಂದಕ್ಕೊಂದು ಹತ್ತಿರವಿರುವ ಮೂರು ಗೆರೆಗಳನ್ನುಳ್ಳ 'ಸಮಚತುಷ್ಕೋಣ' (Quadrilateral) ನಾಲ್ಕು ಕಡೆಗಳಲ್ಲಿಯೂ ಮಧ್ಯದಲ್ಲಿ ಒಂದೊಂದು ತೆರೆದ ನಡುಭಾಗವಿದೆ.

2. ಒಂದಕ್ಕೊಂದು ಹತ್ತಿರವಿರುವ ಮೂರು ಸಮಾನ ಕೇಂದ್ರ ಹೊರವೃತ್ತಗಳ ಮತ್ತು ಇನ್ನೊಂದು ಒಳವೃತ್ತದ ನಡುವೆ ಚಿತ್ರಿಸಿರುವ ಹದಿನಾರು ದಳಗಳ ಪದ್ಮ (ಷೋಡಶದಳ ಪದ್ಮ)

3. ಎರಡನೆಯ ವೃತ್ತ ಮತ್ತು ಮೂರನೆಯ ವೃತ್ತದೊಳಗೆ ಕಾಣುವ ಎಂಟು ದಳಗಳ ಪದ್ಮ (ಅಷ್ಟದಳ ಪದ್ಮ)

4. ಹದಿನಾಲ್ಕು ಹೊರ ತ್ರಿಕೋಣಗಳಿರುವ ಚಕ್ರ (ಚತುರ್ದಶಾರ)

5. ಹತ್ತು ಹೊರ ತ್ರಿಕೋಣಗಳಿರುವ ಚಕ್ರ (ಬಹಿರ್‌ದಶಾರ)

6 ಹತ್ತು ಒಳ ತ್ರಿಕೋಣಗಳಿರುವ ಚಕ್ರ (ಅಂತರ್ ದಶಾರ)

7 ಎಂಟು ತ್ರಿಕೋಣಗಳಿರುವ ಚಕ್ರ (ಅಷ್ಟಕೋನ)

8. ಒಂದು ಮಧ್ಯದ ತ್ರಿಕೋಣ

9. ಕೇಂದ್ರ ಬಿಂದು (ಸರ್ವಾನಂದಮಯ.)

ಮೇಲಿನ ಶ್ರೀಚಕ್ರದ ಒಳವೃತ್ತದಲ್ಲಿ ಕಾಣುವ ಕೆಳತುದಿಯಿರುವ ಐದು ತ್ರಿಕೋಣಗಳು ಶಕ್ತಿ ಸೂಚಕವಾಗಿದ್ದು, ಇವು ಶಿವಯುವತಿಯರ ಸಂಜ್ಞೆ ಎಂದೂ ಮೇಲ್ತುದಿಯುಳ್ಳ ನಾಲ್ಕು ತ್ರಿಕೋಣಗಳು ಶಿವಸೂಚಕವಾಗಿದ್ದು ಶ್ರೀಕಂಠದ ಸಂಜ್ಞೆ ಎಂದೂ ಪ್ರಚುರವಾಗಿವೆ. 'ಸರ್ವಾನಂದಮಯ' ವೆನಿಸಿದ ಕೆಂಪು ಬಣ್ಣದ ಕೇಂದ್ರಬಿಂದುವು ತ್ರಿಪುರ ಸುಂದರಿ ಅಥವಾ ಲಲಿತಾಂಬಿಕಾ ಎಂದು ಕರೆಯಲ್ಪಟ್ಟು, ಕಾಮೇಶ್ವರ–ಕಾಮೇಶ್ವರಿಯರ ಸಮಾಗಮದ ಏಕತ್ವವನ್ನು ಸೂಚಿಸುವುದು.

ಮೇಲೆ ಹೇಳಿರುವ ಶ್ರೀಚಕ್ರದ ಒಂಬತ್ತು ಭಾಗಗಳಲ್ಲಿ, ಆಯಾಭಾಗದ ಕಾರ್ಯ ನಿರ್ವಹ



ಣೆಗೆ ಒಂದೊಂದು ಭಾಗವೂ ಅದರದೇ ಆದ ಆವರಣ ದೇವತೆಗಳನ್ನೋ ಅಥವಾ ಉಪಶಕ್ತಿಗಳನ್ನೋ (Subordinate Saktis) ಹೊಂದಿರುವುದೆಂದೂ, ಕೇಂದ್ರ ಬಿಂದುವಿನಲ್ಲಿ ದೇವಿಯ ಸುತ್ತಲೂ ಹದಿನೈದು ನಿತ್ಯಾದೇವತೆಗಳಿರುತ್ತಾರೆಂದೂ ಹೇಳಲಾಗಿದೆ. ಈ ಹದಿನೈದು ನಿತ್ಯೆಯರೂ ಮೊದಲನೆಯ ನಿತ್ಯೆಯೇ ಆದ ಲಲಿತೆಯ ರೂಪಗಳೆಂದೇ ಸಹಸ್ರನಾಮಗಳಲ್ಲಿ ಒಂದಾದ 'ನಿತ್ಯಾ ಷೋಡಶಿಕಾರೂಪಾ' (391 ನೇ ನಾಮ) ಎಂಬುದು ಸೂಚಿಸುವುದು 1. ಕಾಮೇಶ್ವರಿ, 2. ಭಗಮಾಲಿನಿ, 3 ನಿತ್ಯಕ್ಲಿನ್ನ, 4 ಭೇರುಂಡಾ, 5. ವಹ್ನಿವಾಸಿನೀ, 6 ಮಹಾವಜ್ರೇಶ್ವರಿ, 7. ಶಿವದೂತಿ, 8. ತ್ವರಿತ, 9 ಕುಲಸುಂದರಿ, 10. ನಿತ್ಯಾ, 11. ನೀಲಪತಾಕಿನಿ, 12 ವಿಜಯ, 13 ಸರ್ವ ಮಂಗಳ, 14. ಜ್ವಾಲಾಮಾಲಿನಿ, 15. ಚಿತ್ರಾ, 16 ತ್ರಿಪುರ ಸುಂದರೀ – ಇವರೆ ಹದಿನಾರು ನಿತ್ಯೆಯರು. ಹದಿನೈದು ನಿತ್ಯಾದೇವತೆಗಳು ಮೊದಲನೆಯವಳಾದ ಲಲಿತೆಯ (ಕಾಮೇಶ್ವರಿಯ) ಅಂಗಗಳು ಹಾಗೂ ಲಲಿತೆಯು ಇವರೆಲ್ಲರ ಆತ್ಮ ವಿಗ್ರಹಳಾಗಿರುವಳೆಂದು ತಂತ್ರರಾಜದಲ್ಲಿ ಹೇಳಿದೆ.

ದಿವ್ಯ ಶ್ರೀಚಕ್ರವನ್ನು ಪೂಜಿಸಲು ಪ್ರಾರಂಭಿಸುವ ಆರಾಧಕನು ಪ್ರಥಮ ಹಂತಗಳಲ್ಲಿ ಅದರ ಒಂಬತ್ತು ಭಾಗಗಳ ಅಧಿದೇವತೆಗಳನ್ನು, ಉಪಶಕ್ತಿಗಳನ್ನು ಪ್ರತ್ಯೇಕ ಪ್ರತ್ಯೇಕವೆಂದೇ ಭಾವಿಸಿಕೊಂಡು ಆರಾಧಿಸುತ್ತಾ, ಕಾಲಕ್ರಮೇಣ ಈ ಅಧಿದೇವತೆಗಳೆಲ್ಲರೂ ಮತ್ತು ಉಪಶಕ್ತಿಗಳೆಲ್ಲವೂ ವಿಶ್ವವನ್ನೂ ಮಾನವ ಜನಾಂಗವನ್ನೂ ಸೃಷ್ಟಿಸಿದ ಏಕಮೇವ ಆದಿಶಕ್ತಿಯ ಕೇವಲ ವಿವಿಧ ವಿಭಾಗಗಳೆಂದು ತಿಳಿಯುವ ಮತ್ತು ತಾನೇ ಸ್ವತಃ ಈ ಆದಿಶಕ್ತಿಯಲ್ಲಿ ಲೀನವಾಗಿರುವ ಅನುಭವವನ್ನು ಪಡೆಯುವ ಅತಿ ಮುಖ್ಯ ಸಾಧನಾಹಂತವನ್ನು ತಲುಪುತ್ತಾನೆ.

ಶ್ರೀಚಕ್ರದ ಭಾಷ್ಯಕಾರರು ಸಾಂಕೇತಿಕವಾಗಿ ಶ್ರೀಚಕ್ರವು ಏನೇನನ್ನು ಸೂಚಿಸುತ್ತದೆ ಎಂಬುದನ್ನು ವಿಧವಿಧವಾಗಿ ವರ್ಣಿಸಿರುತ್ತಾರೆ ಇದು ರೇಖಾಕೃತಿಯಿಂದ ಶ್ರೀಪುರವನ್ನು ರೂಪಿಸಿದೆ ಎಂಬುದು ಒಂದು ವರ್ಣನೆಯಾಗಿದೆ. ಇದು ಹೇಗೆಂದರೆ ಶ್ರೀಪುರದಲ್ಲಿ ಚಿಂತಾಮಣಿ ಗೃಹ ಎಂಬ ಒಂದು ಅರಮನೆ. ಇದರ ಮಧ್ಯದಲ್ಲಿ ದೇವಿಯ ಪ್ರಸಿದ್ಧವಾದ ಬಿಂದು ಪೀಠ, ಈ ಮಹಾಪೀಠದಲ್ಲಿ ದೇವಿಯ ವಿರಾಜಮಾನವಾದ ಮಂಚರತ್ನ. ಬ್ರಹ್ಮ, ವಿಷ್ಣು, ಈಶ್ವರ, ಮಹೇಶ್ವರರೇ ಈ ಮಂಚದ ನಾಲ್ಕು ಕಾಲುಗಳು. ಸದಾಶಿವನೇ ಈ ಮಂಚದ ಮೇಲಿನ ಸುಪ್ಪತ್ತಿಗೆ. ಇದರ ಮೇಲೆ ಪೂರ್ವದಿಙ್ಮುಖನಾಗಿ ಕುಳಿತಿರುವ ಕಾಮೇಶ್ವರ. ಈ ಕಾಮೇಶ್ವರನ ಅಂಕದ ಮೇಲೆ ಕುಳಿತಿರುವ ನಿರಂತರ ಷೋಡಶವರ್ಷದವಳಾದ ಶ್ರೀಲಲಿತಾಂಬಿಕೆ. ಶ್ರೀಚಕ್ರವು ರೇಖಾಕೃತಿಯಿಂದ ಶ್ರೀಪುರವನ್ನು ರೂಪಿಸಿದೆ ಎಂದು ಈ ವಿವರಣೆಯು ಸೂಚಿಸುವುದೆಂದು ಹೇಳಲಾಗಿದೆ.

ಕೆಲವು ಭಾಷ್ಯಕಾರರು ಹಿಂದೆ ಹೇಳಲಾದ ಶ್ರೀಚಕ್ರದ ಒಂಬತ್ತು ಭಾಗಗಳೊಳಗೂ ಮತ್ತು

ವಿಶ್ವತತ್ತ್ವಗಳು, ಅಕ್ಷರಮಾಲೆಯ ಅಕ್ಷರಗಳು, ಮನುಷ್ಯನ ದೇಹದಲ್ಲಿನ ಚಕ್ರಗಳು, ವರ್ಷದಲ್ಲಿನ ದಿನಗಳು, ತಿಂಗಳಿನ ತಿಥಿಗಳು ಇತ್ಯಾದಿಗಳೊಳಗೂ ವೇದಾಂತಿಕ ಸಂಬಂಧವನ್ನು ಕಲ್ಪಿಸಿ ಶ್ರೀಚಕ್ರದ ಭಾವಗರ್ಭಿತವಾದ ಅರ್ಥಗಳನ್ನು ವಿವರಿಸಿರುತ್ತಾರೆ.

ರೇಖೆಗಳು, ವೃತ್ತಗಳು, ಬಿಂದುಗಳು ಇತ್ಯಾದಿಗಳಿಂದ ರಚಿತವಾದ ಚಿತ್ರವು ದೇವತಾವಿಗ್ರಹಗಳಿಗಿಂತ ಹೆಚ್ಚು ಭಾವಗರ್ಭಿತವಾದ ದೈವತ್ವದ ಸಂಜ್ಞೆಯಾದುದರಿಂದ ಯಂತ್ರೋಪಾಸನೆಯೇ ಅತ್ಯಂತ ಶ್ರೇಷ್ಠವಾದ ಆರಾಧನಾ ವಿಧಾನವೆಂಬುದು ತಾಂತ್ರಿಕ ಮತದ ಅಭಿಪ್ರಾಯವಾಗಿದೆ. ಇಂತಹ ಪೂಜನೀಯ ಯಂತ್ರಗಳಲ್ಲಿ ಶ್ರೀಚಕ್ರವೇ ಅತ್ಯಂತ ಉತ್ತಮವಾದುದೆಂದೂ ಇದು ಶಿವ–ಶಕ್ತಿಯರ ಸಂಜ್ಞೆ ಮಾತ್ರವಲ್ಲದೆ ಇಡೀ ಬ್ರಹ್ಮಾಂಡದ ಸಂಜ್ಞೆಯಾಗಿದೆಯೆಂದೂ ಹೇಳಲಾಗಿದೆ. ಶ್ರೀಚಕ್ರಕ್ಕೂ ಮಹೇಶ್ವರನಿಗೂ ಲೇಶವೂ ಭೇದವಿಲ್ಲವೆಂಬುದು ಪಂಡಿತರ ಅಭಿಪ್ರಾಯವಾಗಿದೆ. ಒಟ್ಟಿನಲ್ಲಿ, ಶ್ರೀಚಕ್ರವು ತಂತ್ರವೇದಾಂತದ ಮೂಲತತ್ತ್ವಗಳ ಸಮಗ್ರ ವಿವರಣೆಯು ಸಂಕೇತವಾಗಿದೆ ಎಂದು ಹೇಳಬಹುದು.

ಶ್ರೀಲಲಿತಾ ಸಹಸ್ರನಾಮದಲ್ಲಿ ಬರುವ–ಚಕ್ರರಾಜ ರಥಾರೂಢ ಸರ್ವಾಯುಧ ಪರಿಷ್ಕೃತಾ (೬೮); ಚಕ್ರರಾಜ ನಿಕೇತನಾ (೨೪೫); ಬಿಂದು ಮಂಡಲ ವಾಸಿನೀ (೩೮೦); ವಿಶುದ್ಧಿ ಚಕ್ರನಿಲಯಾ (೪೭೫); ತ್ರಿಕೋಣಾಂತರ ದೀಪಿಕಾ (೫೯೭); ಬೈಂದವಾಸನಾ (೯೦೫); ತ್ರಿಕೋಣಗಾ (೯೮೬); ಶ್ರೀಚಕ್ರರಾಜ ನಿಲಯಾ (೯೯೬) ಎಂಬ ನಾಮಗಳಿಂದ ಲಲಿತಾಂಬಿಕೆಯು ಶ್ರೀಚಕ್ರಸ್ಥಳಾಗಿರುವುದನ್ನು ಲಲಿತಾ ಸಹಸ್ರ ನಾಮವು ಸೂಚಿಸುವುದು.

ಶ್ರೀಚಕ್ರವನ್ನು ಪದ್ಮ, ತುಳಸಿ, ಕಲ್ಹಾರ, ಕದಂಬ, ಚಂಪಕ, ಜಾಜಿ, ಮಲ್ಲಿಕಾ, ಕರವೀರ ಉತ್ಪಲ, ಬಿಲ್ವಪತ್ರ, ಕುಂದ, ಕೇಸರ, ಪಾಟಲ, ಅಥವಾ ಇತರ ಸುಗಂಧ ಕುಸುಮಗಳಾದ ಕೇತಕೀ, ಮಾಧವೀ, ಇವುಗಳಿಂದ ಸಹಸ್ರನಾಮ ಪೂರ್ವಕವಾಗಿ ಅರ್ಚಿಸುವ ಭಕ್ತರಿಗೆ ಸಮಸ್ತ ಪುಣ್ಯಫಲಗಳೂ ಲಭಿಸುವುವೆಂದು ಫಲಶ್ರುತಿಯಲ್ಲಿ ಹೇಳಲಾಗಿದೆ.

ಶಾಕ್ತ ಮತದ ಪ್ರಕಾರ ಶಬ್ದಗಳು ಹಾಗೂ ಇವುಗಳು ಸೂಚಿಸುವ ವಿಷಯಗಳು ದೇವಿಯ ಅಭಿವ್ಯಕ್ತಿಯಾಗಿವೆ. ಶಬ್ದಗಳಲ್ಲಿರುವ ಮಾತೃಕೆಗಳೆಂದು ಕರೆಯಲಾದ ಪ್ರತಿಯೊಂದು ವರ್ಣದಲ್ಲಿಯೂ ಶಕ್ತಿಯು ಅಡಗಿದೆ. ಇಂತಹ ಶಕ್ತಿಯುತ ಮಾತೃಕೆಗಳಿಂದ ಉಪಲಬ್ಧವಾದ ಮಂತ್ರವು ದೇವತಾಸ್ವರೂಪವೇ ಆಗಿರುವುದು. ಇಂತಹ ಮಂತ್ರಗಳಲ್ಲಿ ಅತ್ಯಂತ ಉತ್ಕೃಷ್ಟವಾದ ಹದಿನೈದು ಮಾತೃಕೆಗಳಿಂದ ಉತ್ಪನ್ನವಾಗಿರುವ ಪಂಚದಶಾಕ್ಷರಿ ಮಂತ್ರದ ಜಪವು, ಶ್ರೀಚಕ್ರ ಪೂಜೆ ಹಾಗೂ ಲಲಿತಾ ಸಹಸ್ರನಾಮ ಪಠಣಗಳಂತೆಯೇ ದೇವಿಯ ಉಪಾಸನೆಯ ಆವಶ್ಯಕವಾದ ಅಂಗವಾಗಿದೆ. ಪಂಚದಶಾಕ್ಷರಿ ಮಂತ್ರಕ್ಕೆ

(27ನೇ ಪುಟ ನೋಡಿ)

# ಶಿಲ್ಪ ಸಂಗೀತ

ಪ್ರಥಮ ಪ್ರಭಾತ ಉದಯ ತವಗಗನೆ
ಪ್ರಥಮ ಸಾಮರವ ತವ ತಪೋವನೆ
ಪ್ರಥಮ ಪ್ರಚಾರಿತ ತವವನಭವನೆ
ಜ್ಞಾನಧರ್ಮಕೃತ ಕಾವ್ಯವಾಹಿನೀ
ದೇವೀಭುವನ ಮನವೋಹಿನೀ
ಮಾತೃದೇವತೆ, ಜಗಜ್ಜನನೀ

"ಹೇ ದೇವಿ ನಿನ್ನ ತಪೋವನದಲ್ಲಿ ಸಾಮ ಗಾನವು ಕೇಳುವಂತಾಗಿವೆ. ಜ್ಞಾನ ಹಾಗೂ ಕರ್ಮಗಳ ಪೂರ್ಣತ್ವವು ನಿನ್ನ ಅರಣ್ಯದಲ್ಲಿ ಪ ಚಾರಹೊಂದಿವೆ ನಿನ್ನ ಸಂಸ್ಕೃತಿಯಂತು ಜಗನ್ಮೋಹಕವಾದುದು." – ಈ ಕಾವ್ಯ ಗೀತವನ್ನು ರಚಿಸಿದವರು ಮಹಾಕವಿಗಳಾದ ರವೀಂದ್ರನಾಥ ಠಾಕೂರರು.

ಪಾಂಚಭೌತಿಕವಾದ ಈ ಜಗತ್ತಿನ ಮೂಲದಲ್ಲಿ ಸರ್ವರೀತಿಯಿಂದಲೂ ವ್ಯಾಪಕವಾದ ಶಕ್ತಿ ಎಂದರೆ ನಾದ ಅಥವಾ ಧ್ವನಿ, ನಾದದ ಅಭಿವ್ಯಕ್ತಿಯನ್ನು "ಬಿಂದು" ಎಂದು ಕರೆದಿದ್ದಾರೆ. ನಾದ ಹಾಗೂ ಬಿಂದುಗಳ ವಿಷಯವನ್ನು ಕುರಿತು ಅನೇಕ ತಂತ್ರಗಳನ್ನು ಭಾರತದ ಶಾಸ್ತ್ರಕಾರರು ಅಳವಡಿಸಿಕೊಂಡಿದ್ದಾರೆ. ಸಾಮ ಸಂಗೀತಾಭ್ಯಾಸಿಗಳು ಮೊದಲು ಬಾಹ್ಯ ಸ್ವರೂಪವನ್ನು ಸರಿಯಾಗಿ ತಿಳಿದುಕೊಂಡಾಗ ಮಾತ್ರ ಈ ವೇದಾರ್ಥದ ಅಂತರಂಗದ ತಿರುಳು ದೃಗ್ಗೋಚರವಾಗುತ್ತದೆ. ಸಾಮ ಎಂದರೆ ಸಂಗೀತ.

ಸಂಗೀತಕ್ಕೆ ಪ್ರಕೃತಿಯೇ ಮಾರು ಹೋಗುವಾಗ ಆ ಪ್ರಕೃತಿಯಿಂದ ಜನ್ಮರಾದ ಜೀವಿಗಳಿಗೆ ಸುಮಧುರವಾದ ಸಂಗೀತವು ತಾರಕಮಂತ್ರವೆನಿಸುವುದು. ಸಂಗೀತವು ಶಿಶುಗಳಿಗೂ, ಪಶುಗಳಿಗೂ, ಖಗ ಮೃಗಗಳಿಗೂ ಸಸ್ಯಾದಿ ವರ್ಗಗಳಿಗೂ ನವ ಚೇತನವನ್ನೀಯುವ ಒಂದು ಸಾಧನ, ಈ ಮಾತನ್ನು ಇಂದಿನ ಅಧುನಿಕ ವಿದ್ವಾಂಸರೂ ಒಪ್ಪುತ್ತಲಿದ್ದಾರೆ

ಭಾರತದ ಸಿಂಧೂ ನಾಗರಿಕತೆಯ ಕಾಲದಲ್ಲಿ ನೃತ್ಯ ಸಂಗೀತಾದಿಗಳಿಗೆ ವಿಶೇಷವಾದ ಮಹತ್ವವನ್ನೀಯುತ್ತಿದ್ದರೆಂದು ಆ ನಾಗರಿಕತೆಯನ್ನು ಕುರಿತು ಅಭ್ಯಾಸಮಾಡಿದ ವಿದ್ವಾಂಸರ ಅಭಿಪ್ರಾಯವಿದೆ, ಹರಪ್ಪ ಮಹೆಂಜೋದಾರೋ ಕುರಿತು ಸಂಶೋಧನೆಯ ಕಾರ್ಯವನ್ನು ಕೈಕೊಂಡಾಗ ನರ್ತಕಿಯ ಕಂಚಿನ ವಿಗ್ರಹ ಮತ್ತು ಪುರುಷನ ಶಿಲಾ ವಿಗ ಹಗಳು ದೊರೆತಿವೆ. ಕ್ರಿಸ್ತಪೂರ್ವ ೩೮೦೧ ವರ್ಷಗಳ ಹಿಂದೆ ಹರಪ್ಪನ್ನರು ಸಂಗೀತನೃತ್ಯ ಬಲ್ಲವರಾಗಿದ್ದರೆಂದು ಇವರಿಂದ ಊಹಿಸಲ್ಪಡುತ್ತದೆ. ಅಲ್ಲದೆ ಉತ್ಖನನದಲ್ಲಿ ಶಂಖದಿಂದ ತಯಾರಿಸಿದ ಎರಡು ವಸ್ತುಗಳೂ ದೊರೆತಿವೆ. ಇವುಗಳ ತುದಿಯಲ್ಲಿ ಆಯತಾಕಾರದ ಎರಡು ಚಿನ್ಹೆಗಳಿವೆ. ಇವು ತಂತಿಯನ್ನು ಮೀಟುವಾಗ ಬಳಸುತ್ತಿದ್ದ ಸಾಧನವೆಂದು ಲೋಥಲ್ ಸ್ಥಳವನ್ನು ಸಂಶೋಧನೆ ಮಾಡಿದ ಶ್ರೀ ಎಸ್. ಆರ್. ರಾವ್ ಅವರು ಅಭಿಪ್ರಾಯ ಪಡುತ್ತಾರೆ

ಅವರು ಇನ್ನೂ ಮುಂದುವರೆದು ಹರಪ್ಪನ್ನರು ಸುಸಂಪನ್ನ ನಾಗರಿಕರಾಗಿದ್ದು ಸುವ್ಯವಸ್ಥಿತವಾದ ಸುಸಜ್ಜಿತವಾದ ನಗರದಲ್ಲಿ ವಾಸಿಸುತ್ತಿದ್ದರೆಂದು, ಸಮುದ್ರಯಾನದ ವ್ಯಾಪಾರವು ಅವರಿಗೆ ಬಹು ಪ್ರಿಯವಾಗಿತ್ತೆಂದೂ ಸುಮೇರಿಯಾದೊಂದಿಗೆ ಈ ಜನಾಂಗವು ಹೆಚ್ಚಿನ ಸಂಪರ್ಕವನ್ನು ಇಟ್ಟುಕೊಂಡಿತ್ತೆಂದೂ ಅವರಿಂದ ಕ್ರಿಸ್ತಪೂರ್ವ ೨೩೦೦ ರಿಂದ ೧೭೫೦ ರ ನಡುವಿನ ಕಾಲದಲ್ಲಿಯ ಕೆಲವು ಮೊಹರಿನ ಗುರುತುಗಳು ಸುಮೇರಿಯಾದಲ್ಲಿಯೂ ಸಹ ಕಾಣುವಂತಾಗಿದೆಯೆಂದೂ ಸುಮೇರಿಯನ್ನರು ಬಳಸುತ್ತಲಿದ್ದ ತ್ರಿಕೋನಾಕೃತಿಯ ತಂತಿವಾದ್ಯವನ್ನೇ ಹೋಲುವಂತಹ ವಾದ್ಯವನ್ನು ವೇದಕಾಲದ ನಮ್ಮ ಪೂರ್ವಜರೂ ಬಳಸುತ್ತಿದ್ದರೆಂದೂ 'ವಾಣ' ಎಂದು ಕರೆದ ಈ ವಾದ್ಯವನ್ನು ಮುಂದಿನವರು 'ವೀಣಾ' ಎಂದು ಕರೆದರೆಂದೂ ಅಭಿಪ್ರಾಯ ಪಟ್ಟಿದ್ದಾರೆ.

ಶ್ರೀ ಆದ್ಯ ರಾಮಾಚಾರ್ಯ

ಭಾರತೀಯರು ಮಂಗಳಕಾರ್ಯಾದಿಗ



ಳಲ್ಲಿ ವಿಜಯೋತ್ಸಾಹದಲ್ಲಿ ಶಂಖಧ್ವನಿಗೈವ ಪದ್ಧತಿ ಅತಿ ಪ್ರಾಚೀನ. ಅದರಂತೆ ಅದನ್ನನುಸರಿಸಿ ಕೊಂಬು ಕಹಳೆ ಹುಟ್ಟಿಕೊಂಡವು. ಈ ರಾಗಧ್ವನಿಗೆ ಸರಿಹೊಂದುವ ಚರ್ಮದ ಹೊದಿಕೆಯಿಂದ ಮಾಡಿದ ತಮಟೆ, ಪ್ರಾಣಿಗಳ ನರವನ್ನು ಬಳಸಿಮಾಡಿದ ತಂತುವಾದ್ಯ, ಪೊಳ್ಳು ಬಿದಿರಿನಿಂದ ಮಾಡಿದ ಕೊಳಲು – ಇವು ಒಂದೊಂದಾಗಿ ನಮ್ಮ ದೇಶದಲ್ಲಿ ಪ್ರಚಾರಕ್ಕೆ ಬಂದವು. ಸಂಗೀತ ಸಾಧನಗಳ ಬಳಕೆಯು ವಿವಿಧ ಹಂತವನ್ನು ಹೊಂದಿದಂತೆ ಸಂಗೀತದ ಸ್ವರ ಪದ್ಧತಿಯಲ್ಲಿಯೂ ಸಹ ವಿವಿಧ ಬದಲಾವಣೆಗಳಾಗ ತೊಡಗಿದವು.

ವೈದಿಕ ಸಾಹಿತ್ಯದಲ್ಲಿ ತಂತು ವಾದ್ಯ ಸುಶರೀರವಾದ್ಯ ಮೊದಲಾದ ವಾದ್ಯಗಳ ಉಲ್ಲೇಖವು ಕಾಣಸಿಗುವುದು. ತಾಳ, ಲಯ ಮೊದಲಾದವುಗಳಿಗೆ ಘನರೂಪದ ವಾದ್ಯಗಳನ್ನು ಬಳಸಿ ನರ್ತಿಸುವ ಸಂಪ್ರದಾಯವು ಪ್ರಾಚೀನ ಭಾರತದಲ್ಲಿ ಇದ್ದುದು ಕಂಡು ಬರುವುದು. ನಮ್ಮ ಪೂರ್ವಜರು ಅವಶ್ಯವಾಗಿ ಕಲಿಯಬೇಕಾದ ೬೪ ವಿದ್ಯೆಗಳಲ್ಲಿ ಸಂಗೀತಕ್ಕೆ ವಿಶೇಷವಾದ ಮನ್ನಣೆಯನ್ನಿತ್ತಿದ್ದರು. ಅವರು ತಮ್ಮ ವಿಲಾಸಕ್ಕಾಗಿ ಸಂಗೀತವನ್ನು ಬಳಸದೆ ಅವನ್ನು ಭಕ್ತಿ ಪ್ರಧಾನವಾದ ಸಾಧನವೆಂದು ಸಾಕ್ಷಾತ್ಕರಿಸಿಕೊಂಡಿದ್ದರು. ಈ ಸಂಗೀತ ನೃತ್ಯ ಇವುಗಳ ರೂಪಕಗಳು ಕಾಲಾಂತರದಲ್ಲಿ ಶಿಲ್ಪ ಶಾಸ್ತ್ರದಲ್ಲಿಯೂ ಪ್ರಧಾನ ಭಾಗಗಳಾಗಿ ಕಾಣುವಂತಾದವು. ಯಕ್ಷ, ಯಕ್ಷಿಣಿ ವೃಕ್ಷದೇವತೆ, ನಾಗದೇವತೆ – ಮೊದಲಾದ ದೇವತಾ ವಿಗ್ರಹಗಳು ವಿವಿಧ ಭಂಗಿಗಳ ಶಿಲ್ಪಶಾಸ್ತ್ರದಲ್ಲಿ ಕಾಣಲಾರಂಭಿಸಿದವು.

ಕರ್ನಾಟಕ ರಾಜ್ಯದ ವಾಸ್ತುಶಿಲ್ಪ ಕಲೆಯಲ್ಲಿ ಬಿಜಾಪುರಜಿಲ್ಲೆಯ ಬಾದಾಮಿ, ಪಟ್ಟದಕಲ್ಲು, ಐಹೊಳೆ, ಮೊದಲಾದ ಸ್ಥಳಗಳಲ್ಲಿ ಚಾಲುಕ್ಯರಿಂದ ನಿರ್ಮಿತವಾದ ದೇವ ಮಂದಿರಗಳಲ್ಲಿ ಅದರಲ್ಲಿಯೂ ಸಹ ಮಾಲಗಿತ್ತಿ ಶಿವಾಲಯದಲ್ಲಿ ಅನೇಕ ವಾದ್ಯಗಳನ್ನು ಹಿಡಿದ ವಿಗ್ರಹಗಳ ಕೆತ್ತನೆಯ ಕಾರ್ಯವನ್ನು ಕಾಣಬಹುದು. ತಾಳ, ಶಂಖ, ಮೃದಂಗ ಮೊದಲಾದವುಗಳನ್ನು ಹಿಡಿದ ವಿಗ್ರಹಗಳನ್ನು ಮೇಗುತಿಯ ದೇವಾಲಯದಲ್ಲಿಯೂ ಕಾಣಬಹುದು. ನರ್ತನಶೈಲಿಯಲ್ಲಿ ಕೊಂಬು, ಕೊಳಲು, ತೂರ್ಯಾದಿಗಳನ್ನು ಹಿಡಿದು ತಾಳ ಬಾರಿಸುತ್ತ ಸಾಗಿದ ಗಣಕೂಟವನ್ನು ಬಾದಾಮಿಯ ಮೂರನೆಯ ಗುಹೆಯಲ್ಲಿ ನೋಡಬಹುದು.

ಭಾರತೀಯ ಶಿಲ್ಪಕೃತಿಗಳಲ್ಲಿ ನಾಲ್ಕು ಪ್ರಮುಖ ಭಾಗಗಳಿವೆ. ೧. ತಟ–ತಂಬೂರಿ (ತಂತುವಾದ್ಯ), ೨. ಅವಧ – ನಗಾರಿ (ತಾಡವಾದ್ಯ), ೩. ಸುಶಿರ – ಕೊಳಲು (ಗಾಳಿಯ ಸಹಾಯದಿಂದ ಊದುವುದು), ೪. ಘನಬೃಹದಾಕಾರ – ಗಟ್ಟಿಮುಟ್ಟಾದ್ದು (ಡೋಲು) ಈ ನಾಲ್ಕು ವಾದ್ಯಗಳನ್ನು ಶಿಲ್ಪ ಕೃತಿಗಳಲ್ಲಿ ಕಾಣಬಹುದು. ಇನ್ನು ತಂತು ವಾದ್ಯದಲ್ಲಿ ಒಂದೇ ತಂತಿಯಿಂದ ಪ್ರಾರಂಭವಾದ ಸಾಧನವೇ ಮುಂದೆ ವೀಣೆಯ ವರೆಗೂ ಬೆಳೆದು ಬಂದಿತೆಂಬ ಮಾತನ್ನು ಶಾರ್ಙದೇವನು ಸಂಗೀತರತ್ನಾಕರದಲ್ಲಿ ಹೇಳಿದುದುಂಟು. ಬಾದಾಮಿಯ ಶಿಲ್ಪಕಲಾ ಕೃತಿಗಳಲ್ಲಿ ಏರತಂತುವಾದ್ಯವನ್ನೇ ಹೆಚ್ಚಾಗಿ ರೂಪಿಸಲಾಗಿದೆಯೆಂದು ತಜ್ಞರು ಅಭಿಪ್ರಾಯ ಪಡುವರು. ಮೇಗುತಿಯ ಜೈನ ದೇವಾಲಯದಲ್ಲಿ ನಾನಾ ವಿಧವಾದ ಸಂಗೀತ ವಾದ್ಯಗಳನ್ನು ಅಧಿಷ್ಠಾನ ಭಾಗದಲ್ಲಿ ಇಡಿಸಿದ್ದಾರೆ. ಘಟ, ಕಮಾನಿನಾಕಾರದಲ್ಲಿರುವ ವೀಣೆ, ಗಿಟಾರಿನಂತಿರುವ ತಂತುವಾದ್ಯ – ಇವೇ ಮೊದಲಾದವುಗಳನ್ನು ಇಲ್ಲಿ ಕಾಣಬಹುದು.

ಚಾಲುಕ್ಯರ ಅನಂತರ ಹೊಯ್ಸಳರ ಕಾಲದ ಶಿಲ್ಪಕಲೆಯಲ್ಲಿ ಸಂಗೀತವನ್ನು ಕುರಿತು ಅಭ್ಯಾಸ ಮಾಡಹೊರಟಾಗ ದೇವಾಲಯದ ಅಧಿಷ್ಠಾನ ಭಾಗದಲ್ಲಿ ಜೋಡಿಸಿದ ಬಾಲಿಕೆಯರು ನಾನಾ ಭಾವಭಂಗಿಗಳಲ್ಲಿ ನಿಂತು ತಮ್ಮ ಕೈಗಳಿಂದ ಸಂಗೀತ ವಾದ್ಯಾದಿಗಳನ್ನು ಮಿಡಿಸುತ್ತಿರುವಂತೆ ಕಾಣುವ ಸುಂದರವಾದ ವಿಗ್ರಹಗಳು ಅಭ್ಯಾಸಿಗರ ಕಣ್ಮನಗಳನ್ನು ತಣಿಸುತ್ತಿವೆ. ಇಲ್ಲಿ ತಂತು ವಾದ್ಯಗಳ ಬಳಕೆ ಹೆಚ್ಚಾಗಿ ಕಂಡು ಬರುವುದಿಲ್ಲ. ಬದಲಾಗಿ ಕೊಳಲು, ಕಾಂಸ್ಯ, ಡಮರುಗಳನ್ನು ಮಿಡಿಯುತ್ತ ನಿಂತ ಭಾವ ಭಂಗಿಗಳನ್ನೇ ನೋಡುತ್ತೇವೆ, ಈ ಡಮರುಗಳಿಗೆ ತತ್ಸಮಾನನಾದ ಘನವಾದ್ಯಗಳನ್ನು ಬಳಸುವುದರಲ್ಲಿ ಹೊಯ್ಸಳ ಶಿಲ್ಪಿಗಳು ಅದ್ವಿತೀಯರೆನ್ನಿಸಿದರು. ವಾದ್ಯಗಳನ್ನು ಹಿಡಿದುನಿಂತ ವಿಗ್ರಹಗಳೆಲ್ಲಾ ಹೆಚ್ಚಾಗಿ ಸ್ತ್ರೀ ವಿಗ್ರಹಗಳೆಂದೇ ಹೇಳಬಹುದು. ಅಜಂತಾಗುಹೆಗಳಲ್ಲಿಯೂ ಸಹ ಡಮರುಗಳನ್ನು ಹಿಡಿದು ನಿಂತ ಸ್ತ್ರೀ ಚಿತ್ರಗಳು ಕಾಣಸಿಗುತ್ತವೆ. ಎಂಬ ಮಾತು ಇಲ್ಲಿ ಸ್ಮರಣೀಯ.

ಭಾರತೀಯ ಸಂಗೀತ ಪ್ರಪಂಚದಲ್ಲಿ ಸ್ತ್ರೀಯರು ಪ್ರಧಾನಪಾತ್ರವನ್ನು ವಹಿಸುತ್ತಿದ್ದರೆಂಬ ಮಾತು ಶಿಲ್ಪಕಲೆಯಲ್ಲಿ ಸಂಗೀತವನ್ನು ಕುರಿತು ಅಭ್ಯಾಸ ಮಾಡಿದವರಿಗೆ ಮನದಟ್ಟಾಗುತ್ತದೆ.

ಕನ್ನಡಿಗರ ಮಹಾ ಸಾಮ್ರಾಜ್ಯವೆಂದು ಕರೆಸಿಕೊಂಡ ವಿಜಯ ನಗರದ ಶಿಲ್ಪಶೈಲಿಯಲ್ಲಿಯೂ ಸಹ ಯಕ್ಷ – ಯಕ್ಷಿಣಿಯರ ವಿಗ್ರಹಗಳು ಕಾಣಸಿಗುತ್ತವೆ. ಅಲ್ಲದೆ ವಿಜಯವಿಠಲನ ಗರ್ಭಗೃಹದ ಮುಂಭಾಗ

(27 ನೇ ಪುಟ ನೋಡಿ)






# ಎರಡು ಚಿಕ್ಕ ಚೊಕ್ಕ ಕೃತಿಗಳು

ಶ್ರೀಯುತ ಬಿ. ಕೆ. ಶ್ರೀನಿವಾಸಮೂರ್ತಿಯವರು ಬರೆದು ಪ್ರಕಟಿಸಿದ "ವಾಯು ಜೀವೋತ್ತಮತ್ವ ಸಮರ್ಥನ" ಎನ್ನುವ ಚಿಕ್ಕಕೃತಿ, ಆಕೃತಿಯಲ್ಲಿ ಕಿರಿದಾದರೂ ಅದರಲ್ಲಿ ಪ್ರತಿಪಾದಿತವಾದ ತಾತ್ತ್ವಿಕ ವಿಚಾರಗಳು ಬಹು ಬೆಲೆಯುಳ್ಳದ್ದು. ಶ್ರುತಿ ಸ್ಮೃತಿ ವಾಕ್ಯಗಳನ್ನುದ್ಧರಿಸಿ; ಪರಮಾತ್ಮನ ಸೇವಾ ಧುರೀಣರಾದ ವಾಯುದೇವರ ಜೀವೋತ್ತಮತ್ವ, ಸರ್ವಜ್ಞತ್ವ, ಜ್ಯೇಷ್ಠತ್ವ ಶ್ರೇಷ್ಠತ್ವ – ಮುಂತಾದುವುಗಳನ್ನು ಪ್ರತಿಪಾದಿಸುವಲ್ಲಿ ಉಪನಿಷದ್ವಾಕ್ಯಗಳನ್ನು ಸಾಧಾರ ಉದ್ಧರಿಸಿ ವ್ಯಾಖ್ಯಾನಿಸಿದುದರಿಂದ ಜನಸಾಮಾನ್ಯರಿಗೂ ಉಪಾದೇಯವಾಗಿದೆ ಈ ಗ್ರಂಥ. ಹನುಮ, ಭೀಮ, ಮಧ್ವಾಚಾರ್ಯರೆಂಬ ಅವತಾರತ್ರಯದ ವಿಮರ್ಶೆ ಇಲ್ಲಿದೆ. ವಾಯುದೇವರ ಮಹಿಮೆ ಆಮೂಲಚೂಲ ವಿವರಿಸಲ್ಪಟ್ಟಿದೆ. "ಶ್ರೀಪತೇಃ ಸದೃಶೋ ದೇವೋ ವಾಯೋಸ್ತು ಸದೃಶೋ ಗುರುಃ। ತದ್ಭಾಷ್ಯ ಸದೃಶಂ ಶಾಸ್ತ್ರಂ ನಭೂತಂ ನ ಭವಿಷ್ಯತಿ॥" ಎನ್ನುವ ಪದ್ಯವು ತುಂಬ ಗಮನಾರ್ಹ. "ಭೂಭಾರ ಹರಣೇ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ", "ದೇವ ಶ್ರೇಷ್ಠಶ್ಚ ಮಾರುತಃ" ಎನ್ನುವ ಮಾತುಗಳು. ವಾಯು ಶಬ್ದಾರ್ಥವು ಬಲಜ್ಞಾನ ಸ್ವರೂಪ ಎನ್ನುವ ಸೊಲ್ಲು ವಾಯುದೇವರ ಶ್ರೇಷ್ಠತೆಯನ್ನು ಸಾರುತ್ತವೆ. "ನಾತ್ರ ಕಾರ್ಯಾ ವಿಚಾರಣಾ".

ವಾಯು ಎಂದರೆ ಗಾಳಿ ಎಂದು ಸಾಮಾನ್ಯಾರ್ಥವಾದರೂ ಪ್ರಾಣ ಎನ್ನುವುದೇ ಪ್ರಧಾನಾರ್ಥ. "ಶರೀರಾಂತಃ ಸಂಚಾರೀ ವಾಯುಃ ಪ್ರಾಣಃ" ಎನ್ನುತ್ತಾರೆ ನೈಯ್ಯಾಯಿಕರು. ಈ ಪ್ರಾಣಾಧೀನವಾಗಿ ವಾಙ್ಮನಶ್ಚಕ್ಷು ಶ್ರೋತ್ರಾದಿ ಸಕಲೇಂದ್ರಿಯ ವ್ಯಾಪಾರಗಳೂ ಇವೆ. "ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ" ಎನ್ನುವ ಮಂತ್ರವನ್ನು ಮನನಮಾಡಬೇಕು. ಪ್ರಾಣನೇ ಉಪಾಧಿಭೇದದಿಂದ ಅಪಾನ, ಪ್ರಾಣ, ಸಮಾನ, ಉದಾನ, ವ್ಯಾನ ಎಂದೆನ್ನಿಸಿ ಪಂಚಪ್ರಾಣವೆನ್ನಿಸಿಕೊಂಡು ಕಾಯದ ಅಸ್ತಿತ್ವಕ್ಕೂ ಆತ್ಮನ ಚೋದನೆಗೂ ಕಾರಣವಾಗಿದೆ. ಪಂಚೇಂದ್ರಿಯ ವ್ಯಾಪಾರ ಇದರಿಂದಲೇ. ಪೂರಕ, ಕುಂಭಕ, ರೇಚಕಗಳಲ್ಲಿ ಪ್ರಾಣಾಯಾಮಕ್ಕೊಳಗೊಂಡ ವಾಯುಸಿದ್ಧಿ ಯೋಗಸಾಧನಕ್ಕೆ ಹೇಳಿಸಿದುದು. "ಪ್ರಾಣೋ ಹಿ ಭೂತಾನಾಮಾಯುಃ" ಎನ್ನುತ್ತದೆ ತೈತ್ತಿರೀಯೋಪನಿಷತ್. ಪ್ರಾಣನೇ ಇಂದ್ರಿಯ ವ್ಯಾಪಾರಗಳ ಹತೋಟಿಯುಳ್ಳದ್ದು. ಪ್ರಾಣವು ಇತರ ಇಂದ್ರಿಯಗಳು ನಿದ್ರಿಸಿದಾಗಲೂ ಜಾಗೃತವಾಗಿರುವ ಹಿರಿಮೆಯುಳ್ಳದ್ದು. ಸುಷುಪ್ತಿಯಲ್ಲೂ ಉಸಿರಾಟಕ್ರಿಯೆ ನಡೆದೇ ನಡೆಯುವುದು. ಸುಷುಪ್ತಿಯಲ್ಲಿ ಇತರ ಯಾವ ಇಂದ್ರಿಯವೂ ಕಾರ್ಯಪ್ರವೃತ್ತವಾಗುವುದಿಲ್ಲ. "ಪ್ರಾಣೋಹ್ಯೇವೈತಾನಿ ಭವಂತಿ ಸರ್ವಾಣಿ" ಎನ್ನುವುದು ಇದಕ್ಕೇ.

ಪವಮಾನ ಸೂಕ್ತ, ಗರುಡಪುರಾಣ, ಮಹಾಭಾರತ, ಸ್ಕಾಂದಪುರಾಣ, ಬ್ರಹ್ಮಪುರಾಣ, ವರಾಹಪುರಾಣ–ಹೀಗೆ ಅನೇಕ ಆಕರಗಳಿಂದ ವಾಯುಜೀವೋತ್ತಮತ್ವವನ್ನು ಸಮರ್ಥಿಸಿರುವ ಈ ಚಿಕ್ಕ, ಚೊಕ್ಕ ಕೃತಿ "ನಮಸ್ತೇ ವಾಯೋ! ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ" ಎನ್ನುವ ನಿರ್ಧಾರಕ್ಕೆ ಬರಲು ತುಂಬ ಸಹಕಾರಿಯಾಗಿದೆ. ವಾಯುದೇವರ ಮಹಿಮಾಜಿಜ್ಞಾಸುಗಳಿಗೆ ಇದು ಸುಲಭ ಪ್ರವೇಶಿಕೆ ಆಗಬಲ್ಲುದು. ಗ್ರಂಥದಲ್ಲಿ ಅಲ್ಲಲ್ಲಿ ಬಂದಿರುವ ಮುದ್ರಣ ದೋಷವನ್ನು ಬಿಟ್ಟರೆ ಈ ಕೃತಿ, ಮಂತ್ರ ಅರ್ಥ ವಿವರಣೆಗಳನ್ನು ಮಾಡುವಲ್ಲಿ ಯಶಸ್ವಿಯಾಗಿದೆ. ನಿಜಕ್ಕೂ ಸಂಗ್ರಾಹ್ಯ ಕೃತಿ, ಕೃತಿಕಾರರ ಶ್ರಮ ಸಾರ್ಥಕ.

ಇದೇ ಲೇಖಕರ "ಶ್ರೀ ಬ್ರಹ್ಮಸೂತ್ರ ಭಾಷ್ಯಾರ್ಥಪ್ರಕಾಶಿಕಾ" ಪುಟ್ಟಕೃತಿ ಶ್ರೀ ಮಧ್ವಭಾಷ್ಯಾನುಸಾರಿಯಾಗಿದ್ದು ಪಂಚಾಧಿಕರಣಗಳ ವಿವರಣೆಯನ್ನು — ಸೂತ್ರ, ಅರ್ಥ, ವಿಶೇಷವಿಚಾರಗಳನ್ನೊಳಗೊಂಡು ಕನ್ನಡದಲ್ಲಿ ಸಾರುವ ಪ್ರಯತ್ನವನ್ನು ಮಾಡುತ್ತದೆ. "ಸರ್ವಂ ಖಲ್ವಿದಂ ಬ್ರಹ್ಮ" ಎನ್ನುವ ವಿದ್ವದ್ವಾಣಿ ಅದೆಷ್ಟು ತಾತ್ತ್ವಿಕವಾದುದು! ವೇದಾಂತ ಸೂತ್ರಗಳೆಂದು ಕರೆಯಲ್ಪಟ್ಟ ಬ್ರಹ್ಮಸೂತ್ರಗಳಿಗೆ ೨೨ ಭಾಷ್ಯಗಳಿವೆ. ಆದರೂ ಅವು ಇನ್ನೂ ದುರವಗಾಹವೆನ್ನಿಸುವಂತೆಯೇ ಇವೆ. ಸಂಸ್ಕೃತಭಾಷೆಯಲ್ಲಿರುವ ಈ ಎಲ್ಲ ವ್ಯಾಖ್ಯಾನಗಳೂ ಎಷ್ಟೋ ವಿವರಣೆಯನ್ನಿತ್ತರೂ ಅವು ಈಗ ಅರ್ಥೈಸುವಲ್ಲಿ ಕಠಿಣವಾಗಿವೆ. ಕನ್ನಡದಲ್ಲಿ ವಿರಳವಾದ ಇಂತಹ ಸೂತ್ರಾರ್ಥ ಪ್ರಕಾಶಿಕೆಗಳ ಅವ

(21ನೇ ಪುಟ ನೋಡಿ)

**೧. ವಾಯುಜೀವೋತ್ತಮತ್ವ ಸಮರ್ಥನ**

ಪುಟಗಳು : 4+36, ಬೆಲೆ : ರೂ. 0–50

**೨. ಬ್ರಹ್ಮ ಸೂತ್ರ ಭಾಷ್ಯಾರ್ಥ ಪ್ರಕಾಶಿಕಾ**

ಪುಟಗಳು 3+44 ಬೆಲೆ: ರೂ. 0–50

ಲೇಖಕರು: ಬಿ. ಕೆ. ಶ್ರೀನಿವಾಸಮೂರ್ತಿ
ರಿಟೈರ್ಡ್ ಅಕೌಂಟೆಂಟ್
938 ಹಳೆ ತೀರ್ಥ ಹಳ್ಳಿ ರಸ್ತೆ, ಶಿವಮೊಗ್ಗ.

# ಹಿರಿಯರನ್ನೂ ಆಕರ್ಷಿಸುವ ಎಳೆಯರ ರಾಮಾಯಣ

**ಎಳೆಯರ ರಾಮಾಯಣ**

ಮೈ. ನ. ನಾಗರಾಜ

ಬೆಲೆ: ರೂ. 3–00

ಪ್ರತಿಗಳಿಗಾಗಿ :

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿ. ತಿ. ದೇ. ತಿರುಪತಿ.

ವಾಲ್ಮೀಕಿಯನ್ನು ಆದಿಕವಿಯೆಂದೂ ರಾಮಾಯಣವನ್ನು ಆದಿಕಾವ್ಯವೆಂದೂ ಕರೆದು ಶತಶತಮಾನಗಳಿಂದ ಭಾರತೀಯರು ನಿತ್ಯ ಜೀವನದಲ್ಲಿ ಗೌರವದಿಂದ ನೋಡುತ್ತ ಬಂದಿರುವುದು ತಿಳಿದ ಸಂಗತಿಯೇ ಆಗಿದೆ. ಅಂತೆಯೇ ಆ ಆದಿಕಾವ್ಯದ ಸಹಸ್ರಾರು ಅವತರಣಿಕೆಗಳು ಕೂಡ, ಅದರ ಜನಪ್ರಿಯತೆಯನ್ನೂ ಭಾರತೀಯ ಸಂಸ್ಕೃತಿಯ ನಿರಂತರತೆಯನ್ನೂ ಸೂಚಿಸುವ ಸಂಗತಿ. ಕನ್ನಡದಲ್ಲಿಯೇ 'ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂದು ಕುಮಾರವ್ಯಾಸ ಹಿಂದೆ ಅಂದದ್ದನ್ನು ನೆನೆಸಿಕೊಂಡರೂ, ಅವನ ನಂತರವೂ ಕನ್ನಡದಲ್ಲಿ ರಾಮಾಯಣದ ಕವಿಗಳು ಅಸಂಖ್ಯರಾಗಿ ಬಂದು ಅದರ ಮೂಲ ಸೆಲೆಗೆ ಹೊಸ ಹೊಸ ಹೊನಲುಗಳನ್ನು ಸೇರಿಸಿರುವುದು ಸ್ಪಷ್ಟ.

ಇಂತಹ ಪರಿಸ್ಥಿತಿಯಲ್ಲಿ 'ಎಳೆಯರ ರಾಮಾಯಣ' ಕನ್ನಡದ ಕಿರಿಯರಿಗಾಗಿ ಶ್ರೀ ಮೈ. ನ. ನಾಗರಾಜ ಅವರು ರಚಿಸಿದ್ದಾರೆ; ಎಂದರೆ ಇದರ ವೈಶಿಷ್ಟ್ಯವೇನು ಎಂಬುದು ಸಹಜವೇ ಆಗಬಹುದು. 'ಮಕ್ಕಳಲ್ಲಿ ಕಥೆಯ ಬಗ್ಗೆ ಉತ್ಸುಕತೆ ಹುಟ್ಟಿಸಿ ಅದನ್ನು ಕೊನೆಯವರೆಗೂ ಕಾಯ್ದುಕೊಳ್ಳುವ ಶಕ್ತಿ ಅದಕ್ಕಿದೆ ...... ನಿಮ್ಮ ಶೈಲಿ ಪುಸ್ತಕದ ಶೀರ್ಷಿಕೆಗೆ ತಕ್ಕಂತಿದೆ ... .... ಇಂತಹ ಸತ್ಕಾರ್ಯ ಕೈಗೊಂಡಿರುವುದಕ್ಕಾಗಿ ವಂದನೆಗಳು' ಎಂದ ಕೀರ್ತಿಶೇಷ ಡಾ|| ಡಿ. ವಿ. ಜಿ. ಅವರ ಮಾತುಗಳೇ ಸಾಕು ಇದರ ಹಿರಿಮೆಯನ್ನು ಸೂಚಿಸಲು.

ನೂರ ಎಂಬತ್ತೆರಡು ಪುಟಗಳಲ್ಲಿ ಶ್ರೀ ಮೈ. ನ. ನಾಗರಾಜ ಅವರು ಇಡೀ ರಾಮಾಯಣವನ್ನು ಸಂಗ್ರಹಿಸಿ ಮಕ್ಕಳಿಗೆ ಹಿತವಾಗುವಂತೆ, ಸುಲಭವಾಗಿ ಗ್ರಹಿಸಲು ಅನುಕೂಲವಾಗುವಂತೆ ಮಾಡಿದ್ದಾರೆ. 'ಇಡೀ ಗ್ರಂಥದಲ್ಲಿ ಬಾಲಕರಿಗೆ ಕಷ್ಟವೆನಿಸಬಹುದಾದ ವಾಕ್ಯ ಒಂದೂ ಇಲ್ಲ;' ಎನ್ನುವಷ್ಟು ಸರಳವಾಗಿದ್ದರೂ 'ಸಡಿಲವಾಗಿಲ್ಲ'. ಪ್ರಜಾವಾಣಿಯ ವಿಮರ್ಶೆಯಂತೆ "ಎಳೆಯರ ರಾಮಾಯಣ ಶೀರ್ಷಿಕೆಯ ಪ್ರಕಾರ ಮಕ್ಕಳನ್ನು ಕುರಿತದ್ದಾದರೂ ಹಿರಿಯರೂ ಓದಬಹುದಾದ ಗ್ರಂಥ".

ಕನ್ನಡ ನಾಡಿನ ಖ್ಯಾತ ವಿದ್ವಾಂಸ ಶ್ರೀ ಕೆ. ಟಿ. ಪಾಂಡುರಂಗಿ ಅವರ ಅಭಿಪ್ರಾಯದಲ್ಲಿ 'ಕಥೆಯ ನಿರೂಪಣೆಯು ಸರಳವೂ ಸುಂದರವೂ ಆಗಿದೆ. ರಾಮಾಯಣದ ಮುಖ್ಯ ಕಥೆ, ಅಗಸ್ತ್ಯರ ಕಥೆ, ಭಗೀರಥನ ಕಥೆ ಇತ್ಯಾದಿ ಎಲ್ಲ ಕಥೆಗಳೂ ಸುಂದರವಾಗಿ ಸಂಗ್ರಹಿಸಲ್ಪಟ್ಟಿವೆ.... ಗ್ರಂಥಕರ್ತರು ನಿರೂಪಿಸುತ್ತಾ ಹೋದಂತೆ ಆಯಾಕಥೆಗಳ ನೀತಿ ಪಾಠಗಳನ್ನು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಅಳವಡಿಸಿದ್ದಾರೆ. ವರ್ಣನಾಭಾಗವನ್ನು ಸಂಕ್ಷಿಪ್ತಗೊಳಿಸಿ ಕಥಾಭಾಗ ನೀತಿಭಾಗಗಳಿಗೆ ಮಹತ್ತ್ವ ಕೊಟ್ಟಿದ್ದಾರೆ. ಶ್ರೀರಾಮ ಭರತರ ಸಂವಾದ, ವಶಿಷ್ಠರ ಉಪದೇಶ, ಮಾರೀಚ ಮತ್ತು ಮಾಲ್ಯವಂತರ ಉಪದೇಶ, ಹನುಮಂತನ ಮಾತುಗಳು, ವಿಭೀಷಣನ ಧರ್ಮ ಸಂಕಟ–ಇತ್ಯಾದಿ ವಿಚಾರ ಪ್ರಚೋದಕವಾದ ಭಾಗಗಳನ್ನು ವಿವರವಾಗಿ ಕೊಟ್ಟಿದ್ದಾರೆ. ಹೀಗೆ ರಾಮಾಯಣದಲ್ಲಿ ಅಡಕವಾಗಿರುವ ಸಂಸ್ಕೃತಿಯ ಮೌಲ್ಯಗಳ ಪರಿಚಯ ಮಾಡಿಕೊಡುವ ಉದ್ದೇಶದಿಂದ ಸಂಗ್ರಹಿಸಲ್ಪಟ್ಟ ಈ ಸಾರವು ವಿದ್ಯಾರ್ಥಿಗಳಿಗೂ ಸಾಮಾನ್ಯ ವಾಚಕರಿಗೂ ಆಕರ್ಷಕವಾಗುವುದರಲ್ಲಿ ಸಂದೇಹವಿಲ್ಲ.

ಈ ಕೃತಿ ವಿಶ್ವ ಹಿಂದೂ ಪರಿಷತ್‌ನ ಕರ್ನಾಟಕ ಶಾಖೆಯವರು ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಪುರಾಣ ಪ್ರಬೋಧ ಪರೀಕ್ಷೆಗಳಲ್ಲಿ ಪಠ್ಯ ಪುಸ್ತಕವೂ ಆಗಿದ್ದು ವಿದ್ಯಾರ್ಥಿಗಳಲ್ಲಿ ಈಗಾಗಲೇ ಜನಪ್ರಿಯವಾಗಿದೆ.

ಹಲವಾರು ರೇಖಾಚಿತ್ರಗಳಿಂದಲೂ ಕೂಡಿರುವ ಈ ಕೃತಿಯ ಹಲವು ಭಾಗಗಳು, ಗಂಗಾವತರಣ. ಪಾದುಕಾಪಟ್ಟಾಭಿಷೇಕ ಮೊದಲಾದವು ಮೊದಲು ಸಪ್ತಗಿರಿಯಲ್ಲೂ ಪ್ರಕಟವಾಗಿದ್ದು ಓದುಗರಿಂದ ಉತ್ಸಾಹಕರವಾದ ಪ್ರತಿಕ್ರಿಯೆಗಳು ಬಂದಿವೆ.

೨೦೦ ಪುಟಗಳ ಕೃತಿಯಾದದರೂ ಬೆಲೆ ಮಾತ್ರ ಕೇವಲ ನಾಲ್ಕು ರೂಪಾಯಿ ಎಂದಾಗ ಎಲ್ಲರೂ ಕೊಂಡು ಕೊಳ್ಳಬಹುದು ಎನ್ನುವುದು ಸ್ಪಷ್ಟ.

★

(19ನೇ ಪುಟದಿಂದ)

ರೂಪದ ಸಾಲಿನಲ್ಲಿ ನಿಲ್ಲಬಲ್ಲುದು ಈ ಚಿಕ್ಕ ಕೃತಿ. "ನಾರಾಯಣಂ ಗುಣೈಃ ಸರ್ವೈಃ" (ಪುಟ ೬.) ಎನ್ನುವ ಶ್ಲೋಕದ ವಿಶೇಷಾರ್ಥ ನಿರ್ವಚನ, ಕೃತಿಕಾರರ ವೈದುಷ್ಯವನ್ನು ತಿಳಿಸುತ್ತದೆ. ಅಂತೆಯೇ ಪುಟ ೧೪, ೧೭, ೧೮, ೧೯, ೨೦ ಮುಂತಾದ ಕಡೆಯಲ್ಲಿರುವ ವಿಶೇಷ ವಿಚಾರ ತೀರಾ ಅಗತ್ಯ; ತುಂಬಾ ಪ್ರಯೋಜನಕಾರಿ. ಅಧಿಕರಣಗಳ ಕೊನೆಯ ತಾತ್ಪರ್ಯ ಭಾಗವೂ ಜಿಜ್ಞಾಸುಗಳಿಗೆ ದಾರಿದೀಪದಂತಿದೆ. ಶಾಸ್ತ್ರ ಯೋಗ್ಯತ್ವವುಳ್ಳ ವೇದಾಂತವಿಚಾರದಲ್ಲಿ "ಶುಷ್ಕ ತರ್ಕಂತು ವರ್ಜಯೇತ್" ಎನ್ನುವ ಎಚ್ಚರಿಕೆಯ ಭಾಷ್ಯದ ಉದ್ಧೃತ ಮಾತು ಮನನೀಯವಾದುದು.

ಬ್ರಹ್ಮಜಿಜ್ಞಾಸಾಪರನು – ಶ್ರುತಿಯಲ್ಲಿ ಹೇಳಿದ ;

ಏಕೋದೇವಃ ಸರ್ವಭೂತೇಷು ಗೂಢಃ
ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವ ಭೂತಾದಿವಾಸಃ
ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚ ॥

ಎಂಬುದನ್ನು ನಿದಿಧ್ಯಾಸ ಮಾಡಿಕೊಳ್ಳಬೇಕೆಂದು ತಿಳಿಸುವ ಈ ಕೃತಿ ಮಧ್ವಭಾಷ್ಯಾನುಸಾರಿಯಾಗಿ ಪಂಚಾಧಿಕರಣಗಳ ವಿವರಣೆಯನ್ನು ಸರಳ ರೀತಿಯಿಂದ ಮಾಡಿಕೊಡುತ್ತದೆ. ಅರಣ್ಯದಲ್ಲಿದ್ದು ಗುರುಮುಖೇನ ತಿಳಿಯಬೇಕಾದ ಗಾಢಾದ್ಗಾಢ, ಗೂಢಾದ್ಗೂಢ ವಿಚಾರಗಳನ್ನು ಸುಲಭದಲ್ಲಿ ಬರೆದು ಬರೆದು ತಿಳಿಸುವುದು ಸಾಧ್ಯವಿಲ್ಲ. ಆದರೆ ಒಂದು ಮಿಂಚುನೋಟ, ಇಣುಕುನೋಟ, ವಿಹಂಗಮನೋಟ–ಈ ತರದ ಪುಸ್ತಕಗಳಿಂದ ಸಾಧ್ಯ. ಈ ನಿಟ್ಟಿನಿಂದ ಈ ಕೃತಿಯನ್ನು ಬ್ರಹ್ಮಸೂತ್ರ ಮೀಮಾಂಸಕರು ಸ್ವಾಗತಿಸಬಹುದೆಂದು ತೋರುತ್ತದೆ. ಅಂತಾದರೆ ಕೃತಿಕಾರರ ಶ್ರಮ ಸಫಲವಾದಂತೆ. ಅಚ್ಚಿನ ದೋಷಗಳನ್ನು ಕಳೆದರೆ ಪುಟ್ಟಕೃತಿ ಸುಂದರ ಕೃತಿಯೇ ಸರಿ.

– ಕೆ. ಸುಬ್ರಹ್ಮಣ್ಯಭಟ್ಟ

(18 ನೇ ಪುಟದಿಂದ)

ಮತ್ತೊಂದು ಕೀರ್ತನೆಯಲ್ಲಿ–

ನೀನ್ಯಾಕೋ ನಿನ್ನ ಹಂಗ್ಯಾಕೋ
ನಿನ್ನ ನಾಮದ ಬಲವೊಂದಿದ್ದರೆ ಸಾಕೋ

ಎಂದರೆ, ಮಗದೊಂದು ಹಾಡಿನಲ್ಲಿ

ನರಜನ್ಮ ಬಂದಾಗ ನಾಲಿಗೆ ಇರುವಾಗ
ಕೃಷ್ಣ ಎನ ಬಾರದೆ ।
ಮಲಗಿದ್ದು ಮೈಮುರಿದೇಳು
ತಲೊಮ್ಮೆ........
ಶಾಲ್ಯನ್ನ ಷಡುರಸ ತಿಂದು
ತೃಪ್ತನಾಗಿ.........
ಮಂದಗಾಮಿನಿಯೊಳು
ಸರಸವಾಡುತಲೊಮ್ಮೆ.........
ಪರಿಹಾಸ್ಯದ ಮಾತನಾಡುತಲೊಮ್ಮೆ...
..............................
ದುರಿತ ರಾಶಿಗಳು ತರಿದು ಬಿಸಾಡುವ
ಕೃಷ್ಣಾ ಎನಬಾರದೆ

ಎಂಬುದಾಗಿ ಹಾಡಿದ್ದಾರೆ;

ಕೆಲವರು ಕವಿಗಳು ತಮ್ಮ ತಮ್ಮ ದೇವರುಗಳ 'ಚರಿತ' ವನ್ನು ಹೇಳುವಾಗ, ನಾಮ ಸಂಕೀರ್ತನೆ, ರೂಪ ಸಂಕೀರ್ತನೆ ಮಾಡಿದ್ದಾರೆ. ಪ್ರಸ್ತುತ ಭಗವನ್ನಾಮದ ಹಿರಿಮೆಯನ್ನು ಕನ್ನಡದ ಆದಿಕವಿ ಪಂಪನು ತನ್ನ ಆದಿಪುರಾಣದ ಆರಂಭದಲ್ಲಿ ಹೇಳಿರುವ ಪದ್ಯವನ್ನು ಅವಲೋಕಿಸೋಣ

ಪೆಸರ್ಗೊಂಡಿಂದ್ರ ನರೇಂದ್ರವಂದ್ಯನನ್
ಒರೆಲ್ದೆತ್ತಾನುಮೋರೊರ್ಮೆ ಚಿಂತಿಸಿ
ದಂಗಂ ಪವಣಿಲ್ಲ ಪುಣ್ಯಮನೆ
ಪೂಣ್ದೊಲ್ಪಿಂದಮೋರಂತೆ ಭಾವಿಸಿ ತಾಂ
ತನ್ಮಯನಾಗಿ ತಚ್ಚರಿತಮಂ
ಕಾವ್ಯಂಗಳೊಳ್ ಕೂಡೆ
ಬಣ್ಣಿಸಿ ಪೇಳ್ದಾತನ ಕರ್ಮ
ನಿರ್ಜರೆಯನ್
ಅಂತಿಂತುಂತೆನಲ್ ಬರ್ಕುಮೇ

ಸ್ವರ್ಗದ ಇಂದ್ರರೂ, ಭೂಮಿಯ ನರೇಂದ್ರರೂ ಯಾರಿಗೆ ವಂದಿಸುವರೋ – ಅಂತಹ ದೇವರ ನಾಮವನ್ನು ಮನಸ್ಸಿಗೆ ತಂದು ಕೊಂಡು, ಪ್ರೀತಿ ಪೂರ್ವಕವಾಗಿ, ಒಮ್ಮೆ ಚಿಂತಿಸಿದರೂ ಕೂಡ, ಪುಣ್ಯಕ್ಕೆ ಎಣೆಯಿಲ್ಲ, ಅಂದಮೇಲೆ, ಸದಾಕಾಲವೂ ದೇವರ ನಾಮವನ್ನೇ ಚಿಂತಿಸುತ್ತೇನೆಂದು ಪ್ರತಿಜ್ಞೆ ಮಾಡಿ, ಆ ಪ್ರತಿಜ್ಞೆಯನ್ನು ಕಾಪಾಡಿಕೊಳ್ಳಬೇಕೆಂಬ ಇಷ್ಟದಿಂದ, ಕಾವ್ಯಗಳಲ್ಲಿ ರಸವತ್ತಾಗಿ ಹೊಂದಿಕೊಳ್ಳುವ ಹಾಗೆ ದೇವರ ವರ್ಣನೆಯನ್ನು ಮಾಡಿದರೆ–ಮೋಕ್ಷಕ್ಕೆ ಅಡ್ಡಿತರುವ ಕರ್ಮಗಳು ನಾಶವಾಗುವುದು. ಈ ಕ್ರಮಬಿಟ್ಟು ಹಾಗೆ, ಹೀಗೆ, ಹೇಗೆ ಎನ್ನಲು ಬರುತ್ತದೆಯೇ.

'ಯಾರು ಒಳಗೂ, ಹೊರಗೂ ಪವಿತ್ರತೆ ಬಯಸುವರೋ ಅವರು ರಾಮನಾಮ ವೆಂಬ ಮಣಿ ದೀಪವನ್ನು ದೇಹದ ದ್ವಾರವಾದ ನಾಲಗೆಯಲ್ಲಿಡಲಿ' ಎಂಬುದಾಗಿ ತುಳಸಿದಾದಾಸರು ಹೇಳಿದ್ದಾರೆ–

ರಾಮನಾಮ ಮಣಿದೀಪ
ಧರು ಜಿಹ ದೇಹರಿ ದ್ವಾರ್ ।
ತುಲಸೀ ಭೀತರ್ ಬಾಹಿರೊ ಜೊ
ಚಾಹಸಿ ಉಜಿಯಾರ್ ॥

ಮತ್ತೊಂದೆಡೆ –

ರಾಮ ನಾಮ್‌ಕಿ ಲೂಟ್ ಹೈ
ಲೂಟ್ ಸಕೇ ತೋ ಲೂಟ್ ।
ಅಂತ ಕಾಲ್ ಪಛತಾವೇಗ
ಜಬ್ ಪ್ರಾಣ್ ಜಾಯೇಂಗೆ ಛೂಟ್ ॥

'ರಾಮನಾಮದ ಸೂರೆ ಇದೆ. ಸೂರೆಗೊಳ್ಳುವುದಾದರೆ ತೆಗೆದುಕೊಳ್ಳಿರಿ. ಇಲ್ಲದಲ್ಲಿ ಪ್ರಾಣ ಹೊರಟು ಹೋಗುವಾಗ ಕೊನೆಗಾಲದಲ್ಲಿ ಪಶ್ಚಾತ್ತಾಪ ಪಡಬೇಕಾದೀತು'– ಎನ್ನುತ್ತಾರೆ ದಾಸರು.

ಕೊನೆಯದಾಗಿ, ಸ್ವಾಮಿ ಶಿವಾನಂದ ಸರಸ್ವತಿ ಅವರು 'ಈ ಕಲಿಯುಗದಲ್ಲಿ ಹರಿಯ ನಾಮವೊಂದೇ ಆಶ್ರಯ, ಜೀವನ್ಮುಕ್ತಿಗೆ ಬೇರೆ ಸಾಧನವೇ ಇಲ್ಲ' ಎನ್ನುತ್ತಾರೆ.

ಹರೇರ್ ನಾಮ ಹರೇರ್ ನಾಮ
ಹರೇರ್ ನಾಮೈವ ಕೇವಲಮ್ ।
ಕಲೌ ನಾಸ್ತ್ಯೇವ ನಾಸ್ತ್ಯೇವ
ನಾಸ್ತ್ಯೇವ ಗತಿರನ್ಯಥಾ ॥



# ಕಿಶೋರ ಜಗತ್



## ಸಾಕ್ಷಾತ್ಕಾರ ಸಾಧನ

ಅದೊಂದು ಗ್ರಾಮ. ವರ್ಷಕ್ಕೊಂದು ಸಲ ಅಲ್ಲಿಯ ದೇವತೆಗೆ ರಥೋತ್ಸವ. ಒಂದು ಸಲ ಮೂರು ಮಕ್ಕಳು ತಮ್ಮ ತಂದೆಯ ಜೊತೆ ಉತ್ಸವಕ್ಕೆಂದು ಹೊರಟರು. ದೇವರ ದರ್ಶನವಾಯಿತು. ಮಂಗಳಾರತಿ ತೀರ್ಥ ಪ್ರಸಾದ ಎಲ್ಲವನ್ನೂ ಕೊಟ್ಟರು.

ಹಿಂದಿರುಗಿ ಬರುತ್ತಾ ದೊಡ್ಡ ಮಗ ತಂದೆಯನ್ನು ಕೇಳಿದ – "ಅಪ್ಪಾ, ನಿಜವಾಗ್ಲೂ ದೇವರಿದಾನಾ? ನಾವೂ ನೋಡಬಹುದಾ?"

"ಈಗ್ತಾನೇ ನೋಡಿ ಬರ್ಲಿಲ್ವೇ? ದೇವರಲ್ವೇನು ಅದು?" ತಂದೆ ಗದರಿದ.

"ಅದಲ್ಲಾ ಅಪ್ಪಾ–ನಿಜವಾದ ದೇವರನ್ನ ನಾ ಕೇಳಿದೆ. ನಾವೆಲ್ಲಾ ಹೇಗೆ ಅವನನ್ನು ನೋಡೋದೂಂತ".

"ಹೂ ...... ಹೂ ...... ನಡೀ ಈಗ" ಎನ್ನುತಾ ತಂದೆ ಮಕ್ಕಳನ್ನು ಕರೆದುಕೊಂಡು ಹೊರಟ. ಗುಂಪು, ಗಲಾಟೆ ಗಜಿಬಿಜಿ ಗೊಂದಲಕ್ಕೆ ಬೇಸತ್ತಿದ್ದ ತಂದೆ, ಮಕ್ಕಳೊಂದಿಗೆ ದಾರಿ ಮಾಡಿಕೊಳ್ಳುತ್ತಾ ಹೊರಬಂದ. ಹೊರಬರುತ್ತಲೇ, ತೆರತೆರನಾದ ಅಂಗಡಿಗಳು, ಸಾಲು ಹಿಡಿದು ಕುಳಿತ ಭಿಕ್ಷುಕರು, ಕಡಲೆ ಪುರಿಯರಾಶಿ, ಬತಾಸು, ಕಲ್ಯಾಣಸೇವೆ, ಬಲೂನು, – ಪೀಪಿ, ಶಿಳ್ಳಿ, ಗಿರಗಟ್ಟೆಲೆ, ಕೊಳಲು ಈ ಎಲ್ಲದರ ನೂರೆಂಟು ಅಂಗಡಿಗಳು ತಲೆ ಚಿಟ್ಟೆಸುತ್ತಿತ್ತು.

ಹುಡುಗರು ಬಣ್ಣ ಬಣ್ಣದ ಬೆಲೂನಿಗಾಗಿ ಹಟ ಹಿಡಿದರು. ಅಲ್ಲಿಂದ ಹೋದರೆ ಸಾಕೆನಿಸಿದ್ದ ತಂದೆ, ಮಕ್ಕಳ ಕೈಗೆ ಹತ್ತು, ಹತ್ತು ಪೈಸೆ ಹಾಕಿದ.

ಹುಡುಗರು ಬೆಲೂನು ತರಲು ಓಡಿದರು. ಮಕ್ಕಳು ದಪ್ಪ ದಪ್ಪಗೆ, ಗುಂಡು ಗುಂಡಾಗಿ ಬಣ್ಣ ಬಣ್ಣಕ್ಕೆ ಇದ್ದ ಬಲೂನುಗಳನ್ನು ಪಡೆದು ರಾಜ್ಯವನ್ನು ಗೆದ್ದು ಬಂದ ಧೀರರಂತೆ ಉಬ್ಬಿ ನಡೆಯುತ್ತಾ ಬಂದರು.

ಮೊದಲನೆಯ ಹುಡುಗ ತಾನೂ ಬಲೂನು ತೆಗೆದುಕೊಳ್ಳಲೆಂದು ಬಲೂನಿಗೆ ಕೈ ಹಾಕಿದವನು ಅಲ್ಲೇ ಕುಳಿತಿದ್ದ ಭಿಕ್ಷುಕರ ಸಾಲಿನತ್ತ ನೋಡಿದ. ಅಂತಃಕರಣದಿಂದ ದ್ರವಿಸಿದ ಒಳ ಮನಸ್ಸು ಆಸೆಯಿಂದ ಆತುರಪಡುತ್ತಿದ್ದ ಹೊರಮನಸ್ಸುಗಳಲ್ಲಿ ಘರ್ಷಣೆ ಹುಟ್ಟಿತು.

ಒಂದೇ ಕ್ಷಣ, ಏನನ್ನೋ ನಿರ್ಧರಿಸಿದ ಹುಡುಗ ಅಲ್ಲೇ ಕುರುಡನಾಗಿ ಒಂದೇ ಕಾಲಿನಲ್ಲಿ ಗೋಣೀಚೀಲವೊಂದರ ಮೇಲೆ ಅರೆಬೆತ್ತಲೆಯಾಗಿ, ಉರಿಯುವ ಬಿಸಿಲಿನಲ್ಲಿ ಮಲಗಿ ಕೈನೀಡಿ ಕಾಸಿಗಾಗಿ ಬೇಡುತ್ತಿದ್ದ ಭಿಕ್ಷುಕನ ಬಳಿಗೆ ಹೋಗಿ ತನ್ನ ಪಾಲಿನ ಹತ್ತು ಪೈಸೆಯ ನಾಣ್ಯವನ್ನು ಅವನ ಕೈನಲ್ಲಿ ಹಾಕಿ ನಿಧಾನವಾಗಿ ಹೆಜ್ಜೆ ಹಾಕುತ್ತಾ ಬರಿಗೈನಲ್ಲಿ ತಂದೆಯ ಬಳಿಗೆ ಸಾಗಿದ.

ಇದೆಲ್ಲಾ ನೋಡುತ್ತಾ ಕಡಲೇ ಪುರಿ, ಸೊಪ್ಪಿನ ಕಡಲೇಗಿಡ, ಬತಾಸು, ಕಲ್ಯಾಣಸೇವ ಬಾಳೆಯ ಹಣ್ಣುಗಳನ್ನು ಹೊತ್ತು ನಿಂತಿದ್ದ ತಂದೆ, ಹತ್ತಿರದಲ್ಲೇ ಇದ್ದ ಕೊಳದ ಬಳಿಗೆ ಹೋಗಿ ಮಕ್ಕಳೊಡನೆ ಫಲಾಹಾರಕ್ಕೆ ಕುಳಿತ.

ಗುಂಡಾಗಿ, ದಪ್ಪನೆ, ಬಣ್ಣ ಬಣ್ಣಕ್ಕಿದ್ದ ಬಲೂನುಗಳು ಹುಡುಗರು ತಿಂಡಿ ತಿನ್ನಲು ತುಂಬಿಕೊಳ್ಳುವ ಹವಣಿಕೆಯಲ್ಲಿ ಢಮಾರ್ ಎಂದು ಒಡೆದು ಸಿಡಿದವು. ಮಕ್ಕಳು ಅಳ ತೊಡಗಿದರು.

ತಂದೆ ಹುಡುಗರಿಗೆ ಹೇಳಿದ. "ನೋಡಿ ಮಕ್ಕಳೇ, ಪ್ರಪಂಚದಲ್ಲಿ ಬೇಕಾದಷ್ಟು ಆಸೆ ಆಮಿಷಗಳಿರುತ್ತವೆ. ಆ ಆಸೆಗಳಿಗೆ ಮನಸ್ಸನ್ನಿಳಿಬಿಟ್ಟು ತನ್ನ ಜೀವಿತದ ಗುರಿಯನ್ನು ಕೈ ಬಿಟ್ಟು ಗುರಿಕೆಟ್ಟ ಮನುಷ್ಯ ನಿಮ್ಮಂತೆಯೋ ಅಳುತ್ತಾ ಬದುಕನ್ನು ಒಂದು ದಿನ ಮುಗಿಸಿ ಕಂತೆ ಒಗೆಯುತ್ತಾನೆ.

ಆದರೆ ತನ್ನ ಮನಸ್ಸನ್ನು ಕ್ಷಣಿಕ ಸುಖದತ್ತ ಹರಿಯಬಿಡದೆ ವಿವೇಕದಿಂದ, ಸರಿ ತಪ್ಪನ್ನು ತೂಗಿನೋಡಿ, ಸನ್ಮಾರ್ಗದಲ್ಲಿ ನಡೆದು, ಗುರಿ ಮುಟ್ಟುವ ಮನುಷ್ಯ ತನ್ನ ಬದುಕನ್ನು ಸಾರ್ಥಕಪಡಿಸಿ ಕೊಂಡು, ಸಮಾಧಾನ ಚಿತ್ತದಿಂದ ಸಾಕ್ಷಾತ್ಕಾರದತ್ತ ನಡೆದು ದೇವ ಸಾನ್ನಿಧ್ಯವನ್ನು ಪಡೆಯುತ್ತಾನೆ.

ನೋಡಿ, ಈಗ ನೀವು ಖರ್ಚು ಮಾಡಿದ ಪೈಸೆ ನಿಮಗೆ ದುಃಖ ತಂದಿತು. ಆದರೆ ನಿಮ್ಮ ಅಣ್ಣ ಮಾಡಿದ ಸತ್ಪಾತ್ರದಾನದಿಂದ ಅವ ಮನಸ್ಸಿಗೆ ನೆಮ್ಮದಿ. ಆ ಕುರುಡನಿಗೆ ಸಮಾಧಾನ. ಆ ತ್ಯಾಗ ಶಾಂತಿ ಸಮಾಧಾನ ಸಾರ್ಥಕತೆಯೇ ಅವನು ನೋಡಬೇಕೆಂದಿದ್ದ ದೇವರು. ಇದೇ ದೇವರನ್ನು ನೋಡಲು ಇರುವ ಮಾರ್ಗ. ಅವನು ನಿಜವಾದ ದೇವರನ್ನು ನೋಡಿದ.



**ಪಾರ್ವತಿ ಕೃ. ನ. ಮೂರ್ತಿ**

# ಸ್ವಾಮಿಭಕ್ತೆ ಪನ್ನಾ

ನಮ್ಮ ದೇಶವು ಸಾಗರತಡಿಯಿಂದ ಹಿಮಾಲಯದ ಮುಡಿಯವರೆಗೆ ಹಬ್ಬಿಕೊಂಡಿದೆ. ಸಾಗರ ಮಹಾರಾಜನಾದರೆ ಭೂಮಿಯನ್ನು ತಾಯಿ ಎಂದು ಕರೆಯಲಾಗುತ್ತದೆ. ಇಲ್ಲಿ ಹಲವು ರೀತಿಯ ತಾಯಂದಿರು ಕಂಗೊಳಿಸುತ್ತಿದ್ದಾರೆ. ಅವರೆಲ್ಲರೂ ಭಾರತೀಯರಾದ ನಮಗೆ ಪರಮ ಪೂಜ್ಯರು. ದೆಹಲಿ ದೇಶದ ರಾಜಧಾನಿ. ಅದರ ಹತ್ತಿರದ ನಾಡು, ಮರುಭೂಮಿ, ಬೆಟ್ಟಗುಡ್ಡಗಳ ಬೀಡು, ಬಹಳ ಸುಂದರವಾದ ಪ್ರದೇಶ. ಅದರ ಹೆಸರು ರಾಜಸ್ಥಾನ.

ರಾಜಾಸ್ಥಾನದ ಜನರು ರಜಪೂತರು. ಅವರು ಸೌಂದರ್ಯಕ್ಕೆ, ಶೌರ್ಯಕ್ಕೆ, ರಾಷ್ಟ್ರಪ್ರೇಮಕ್ಕೆ ಹಾಗೂ ಸ್ವಾಮಿಭಕ್ತಿಗೆ ಹೆಸರಾದವರು. "ಪ್ರಾಣಕ್ಕಿಂತ ಮಾನವೇ ಶ್ರೇಷ್ಠ" ಎಂದು ಭಾವಿಸಿ ಮಾನಕ್ಕಾಗಿ ಚಿತೆಯನ್ನೇರುವ ಸಂಪ್ರದಾಯವುಳ್ಳವರು. ಸ್ವಾತಂತ್ರ್ಯಕ್ಕಾಗಿ ಕಾಡು ಮೇಡುಗಳನ್ನು ಸುತ್ತಿ, ಗಡ್ಡೆ ಗೆಣಸುಗಳನ್ನು ತಿಂದು. – "ಇನ್ನೊಬ್ಬರ ಎದುರು ತಲೆಬಾಗಿ ನಿಲ್ಲುವವರಲ್ಲ" ಎಂಬುದನ್ನು ತೋರಿಸಿಕೊಟ್ಟವರು. ಅಂತಹವರಲ್ಲಿ "ರಾಣಾ ಪ್ರತಾಪಸಿಂಹ"ನು ಅಗ್ರಗಣ್ಯನಾಗಿದ್ದಾನೆ. ಅವನು ಅಕ್ಬರನಿಗೆ ತನ್ನ ಹೆಣ್ಣುಗಳನ್ನಾಗಲೀ, ರಾಜ್ಯವನ್ನಾಗಲೀ ಒಪ್ಪಿಸಲಿಲ್ಲ. ಬದಲಿಗೆ ಅಕ್ಬರನೇ ಸೋತು ಅವನನ್ನು "ಸ್ವತಂತ್ರ ರಾಣಾ" ಎಂದು ಗೌರವದಿಂದ ಕೈಕುಲುಕಿದ್ದ. ಅಂತಹ ಪ್ರತಾಪನ ತಂದೆಯೇ "ಉದಯ ಸಿಂಹ". ಉದಯನ ಉಳಿವಿಗೆ ಕಾರಣಳಾದವಳೇ ಮಹಾಸ್ವಾಮಿಭಕ್ತೆ ಪನ್ನೆ.

ಪನ್ನೆ ಸಾಮಾನ್ಯ ದಾಸಿ. ಆದರೆ ಚರಿತ್ರೆಯಲ್ಲಿ ಅವಳ ಸ್ಥಾನ ರತ್ನಮಾಣಿಕ್ಯದಂತೆ ಬೆಳಗುವಂತಹುದಾಗಿದೆ. ಹೊಟ್ಟೆಯ ಮಗನನ್ನು ದುಷ್ಟನ ಕತ್ತಿಗೆ ಬಲಿಕೊಟ್ಟು ರಾಜಕುಮಾರನನ್ನು ರಕ್ಷಿಸಿದ ಕೀರ್ತಿ ಅವಳಿಗೆ ಸಂದಿದೆ.

ಪ್ರತಾಪನ ತಂದೆ ಉದಯಸಿಂಹ ಚಿಕ್ಕವನಿದ್ದಾಗ ಅವನಪ್ಪ ಸಂಗ್ರಾಮ ಸಿಂಹನು ತೀರಿಕೊಂಡಿದ್ದನು. ಅವನಾದರೋ ಒಕ್ಕಣ್ಣಿನ ಒಕ್ಕೈವೀರ. ಹಲವು ಯುದ್ಧಗಳಲ್ಲಿ ಭಾಗವಹಿಸಿದ ಸಿಂಹನಾಗಿದ್ದ. ಅವನ ಕಣ್ಣೊಂದು ಕುರುಡಾಗಿತ್ತು. ಕೈಯೊಂದು ತುಂಡಾಗಿತ್ತು. ತನ್ನ ಕೊನೆಯುಸಿರಿನ ತನಕ "ಕಾಬೂಲಿನ ಹುಲಿ" ಎನಿಸಿದ್ದ ಬಾಬರನೊಡನೆ ಹೋರಾಡಿದ. ಅವನ ಮರಣ ಸಂಭವಿಸುವಾಗ ಉದಯಸಿಗೆ ಕೇವಲ ಆರುವರ್ಷಗಳಾಗಿದ್ದುವಷ್ಟೆ. ಪಾಪ! ತಂದೆಯಿಲ್ಲದ ತಬ್ಬಲಿಗೆ ತಾಯಿಯ ನೆರಳೂ ಇರಲಿಲ್ಲ. ಅವನ ರಕ್ಷಣೆಯ ಭಾರ ಪನ್ನಾದಾಸಿಯ ಮೇಲೆ ಬಿದ್ದಿತ್ತು. ಅವಳಿಗೂ ಅವನದೇ ಪ್ರಾಯದ ಮಗನೊಬ್ಬನಿದ್ದ. ಅವನ ಹೆಸರು "ಚಂದನ" ಎಂದಾಗಿತ್ತು.

ಆ 'ಉದಯ–ಚಂದನ'ರು ಪನ್ನೆಯ ಎರಡು ಕಣ್ಣುಗಳಂತಿದ್ದರು. ಅವರು "ರಾಮ–ಲಕ್ಷ್ಮಣ"ರಂತೆ 'ಲವ-ಕುಶ'ರಂತೆ, "ಬಲಭದ್ರ – ಶ್ರೀಕೃಷ್ಣ"ರಂತೆ ಬೆಳೆಯತೊಡಗಿದರು. ಆದರೆ ಇದು ವಿಧಿಗೆ ಸರಿಬರಲಿಲ್ಲ.

ಸಂಗ್ರಾಮಸಿಂಹನ ಮರಣಾನಂತರ ರಾಜ್ಯದ ಆಡಳಿತ "ವನವೀರ" ಎಂಬ ಅವನ ತಮ್ಮನಿಗೆ ಬಂತು. ಅಧಿಕಾರ ಕೈಗೆ ಬಂದಾಗ ಅವನು "ಹೆಂಡ ಕುಡಿದ ಮಂಗ"ನಂತಾದ. ಹೇಗಾದರೂ ಮಾಡಿ ಮೇವಾಡ ರಾಜ್ಯ ಜೀವನ ಪರ್ಯಂತ ತನ್ನ ಸೊತ್ತಾಗಿರಬೇಕು. ಅಣ್ಣನ ಮಗನಿಗೆ ದಕ್ಕಬಾರದು ಎಂಬ ಹಂಚಿಕೆ ಹಾಕತೊಡಗಿದ.

ಸಂಗ್ರಾಮಸಿಂಹ ಸತ್ತರೂ ಅವನ ಪ್ರೀತಿಯ ಬಂಟರು ಸತ್ತಿರಲಿಲ್ಲ. ಅವರು ಪನ್ನಾಳಿಗೆ ವನವೀರನ ಹಂಚಿಕೆಯ ಹೂಟ ತಿಳಿಸಿದರು. ಸ್ವಾಮಿಭಕ್ತೆ ಪನ್ನಾ ರಾಮನ ಮೇಲೆ ಭಾರಹಾಕಿ ದಿನದೂಡತೊಡಗಿದಳು. ಚಂದನನನ್ನು ಸದಾ ತನ್ನ ಬಳಿಯಲ್ಲಿಯೇ ಇಟ್ಟುಕೊಳ್ಳುತ್ತಿದ್ದಳು. ಆಗ ಉದಯನೂ ಅಲ್ಲೇ ತಿರುಗಾಡುತ್ತಿದ್ದ. ಆದೊಂದು ದಿನ ಕಾಳರಾತ್ರಿಯ ಅಮಾವಾಸ್ಯೆ ತನ್ನ ಕಗ್ಗತ್ತಲೆಯನ್ನು ಹರಡಿತ್ತು. ವನವೀರ ಕತ್ತಿ ಮಸೆಯುತ್ತಿದ್ದ. ಅಂತಃಪುರದಲ್ಲಿ ರಾಣೀವಾಸದವರ ಊಟ ನಡೆದಿತ್ತು. ಊಟದ ಎಲೆ ಎತ್ತುವ ಕೆಲಸ ಆ ಕಾಲದಲ್ಲಿ ಹೂವಾಡಿಗರದ್ದಾಗಿತ್ತು. ಊಟಕ್ಕಾಗಿ ಪತ್ರಾವಳಿಯ ರಚನೆ, ಹೂಮಾಲೆ ಕಟ್ಟುವುದೇ ಮೊದಲಾದ ಕುಸುರಿ ಕೆಲಸಗಳನ್ನು ಅವರು ಮಾಡುತ್ತಿದ್ದರು. ಅವರಲ್ಲೊಬ್ಬ ತನಗೆ ಗೊತ್ತಾದ ವನವೀರನ ಕತ್ತಿ ಮಸೆಯುವಿಕೆಯನ್ನು ಪನ್ನಾಳಿಗೆ ತಿಳಿಸಿದನು.

ಪನ್ನಾಳು ಜಾಗ್ರತಳಾದಳು. ಉದಯಸಿಂಹನು ಉಂಡು ಮಂಚದ ಮೇಲೆ ಗಾಢ ನಿದ್ರೆಯಲ್ಲಿದ್ದ. ಚಂದನನೂ ಇನ್ನೊಂದು ಕೋಣೆಯಲ್ಲಿ ಮಲಗಿ ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದ. ಪನ್ನಾಳು ತನಗೆ ಸದ್ದಿಕೊಟ್ಟ ಹೂವಾಡಿಗನ ಕಿವಿಯಲ್ಲಿ ಏನೋ ಹೇಳಿದಳು. ಎಂಜಲೆಲೆ ಎತ್ತುವ ಬುಟ್ಟಿ ಉದಯಸಿಂಹನ ಮಂಚದ ಪಕ್ಕಕ್ಕೆ ಬಂತು. ಅಡಿಯಲ್ಲಿ ಉಂಡ ಎಲೆಗಳ ಹಾಸಿಗೆ ಸಿದ್ಧವಾಗಿತ್ತು. ಅದರ ಮೇಲೆ ಬಟ್ಟೆ ಹರಡಿ ಉದಯಸಿಂಹನಿಗೆ ಎಚ್ಚರವಾಗದಂತೆ ಮಲಗಿಸಲಾಯಿತು. ಅದರ ಮೇಲೆ ಹೊದಿಕೆ ಹೊದಿಸಿ ಮೇಲ್ಭಾಗದಲ್ಲಿ ಪುನಃ ಉಂಡ ಎಲೆಗಳ ಚಪ್ಪರ ಹೊಂದಿಸಲಾಯಿತು. ಬುಟ್ಟಿಯನ್ನು ಹೊತ್ತ ಹೂವಾಡಿಗ ಅರಮನೆಯನ್ನು ಬಿಟ್ಟು ನಡೆದ.

ಪನ್ನೆ ತನ್ನ ಮಗನಿಗೆ ರಾಜಕುಮಾರನ ಉಡುಗೆ ತೊಡುಗೆಗಳನ್ನು ತೊಡಿಸಿದಳು. ಉದಯಸಿಂಹನ ಮಂಚದ ಮೇಲೆ ಮಲಗಿಸಿದಳು. ಉದಯಸಿಂಹನ ಹೊದಿಕೆಯನ್ನೇ ಹೊದಿಸಿದಳು. ಯಮದೂತನಂತೆ ಬಂದ ವನವೀರ "ಉದಯಸಿಂಹನೆಲ್ಲಿ?" ಎಂದು ಕೇಳಿದ.

**ವಿಶಾಲಾಕ್ಷಿ ಕೆ. ಭಟ್**

"ಅದೋ ಅಲ್ಲಿ" ಎಂದು ಮುಸುಕಿಕ್ಕಿ ಮಲಗಿದ ಬಾಲಕನನ್ನು ತೋರಿಸಿದಳು.

ಹಿಂದೆ ಮುಂದೆ ನೋಡದೆ ಹೊಡೆದ ವನವೀರನ ಖಡ್ಗ ಬಾಲಕನ ತಲೆಯನ್ನು ಶರೀರದಿಂದ ಬೇರೆ ಮಾಡಿತು. ಉಳಿದವರಿಗೆ ತಿಳಿಯಬಾರದೆಂದು ವನವೀರ ಅಲ್ಲಿಂದ ತೆರಳಿದ. ಪನ್ನಾಳೊಡನೆ ಶವಸಂಸ್ಕಾರ ನಡೆಸಲು ಹೇಳಿದ್ದ. ರಕ್ತದ ಮಡುವಿನಲ್ಲಿ ಬಿದ್ದಿದ್ದ ಕುಮಾರನ ಶವವನ್ನು ನದಿಯ ಬಳಿಗ ಕೊಂಡೊಯ್ದಳು ಆ ಧೀರ ಮಹಿಳೆ. "ಹಾವು ಕಚ್ಚಿ ಸತ್ತ ರೋಹಿತಾಶ್ವನನ್ನು ಹೊತ್ತ ಚಂದ್ರಮತಿಯಂತೆ" ಆಗಿತ್ತು ಅವಳ ಸ್ಥಿತಿ.

"ಕುಮಾರಾ ಚಂದನಾ, ಗಂಧ ಕಸ್ತೂರಿಗಳಂತೆ ನಿನ್ನ ಕೀರ್ತಿ ಹರಡಲಿ. ಸ್ವಾಮಿಯ ರಕ್ಷಣೆಗೆ ನಿನ್ನ ಮೈ ತೆತ್ತು ನೀನು ಧನ್ಯನಾದೆ" ಎಂದು ನದಿಯಲ್ಲಿ ತೇಲಿ ಬಿಟ್ಟಳು. ನದಿ ಸಮುದ್ರದೆಡೆಗೆ ಅದನ್ನು ಸಾಗಿಸಿತು.

ಮುಂದೆ ಪನ್ನೆ ತನ್ನನ್ನು ಕಾಯುತ್ತಿರುವ ಹೂವಾಡಿಗನ ಬಳಿಗೆ ಹೋಗಿ ರಾತ್ರೋರಾತ್ರಿಯೇ ನಡೆದು ಬಾಲಕನೊಂದಿಗೆ "ದೇವಳಗಡ"ವನ್ನು ತಲಪಿದಳು. ಅಲ್ಲಿಯ ರಾಜಾನು ಸಂಗ್ರಾಮಸಿಂಹನ ಸಾಮಂತ ರಾಜನಾಗಿದ್ದನು. ಆದರೆ ಅವನಿಗೆ ವನವೀರನ ಹೆದರಿಕೆಯಿತ್ತು. ಅವನು ಉದಯಸಿಂಹನನ್ನು ತನ್ನಲ್ಲಿಟ್ಟುಕೊಳ್ಳಲು ಒಪ್ಪಲಿಲ್ಲ. ಪನ್ನಾಳು "ಬಂದ ದಾರಿಗೆ ಸುಂಕವಿಲ್ಲ" ಎಂದು ಭಾವಿಸಿ ಅಲ್ಲಿಂದ "ಕಮಲಮೇರ್" ಎಂಬ ಮತ್ತೊಂದು ದುರ್ಗಕ್ಕೆ ಹೋದಳು. ಅಲ್ಲಿಯ ರಾಜಾ 'ಆಶಾಶಾಹ'ನು ನೊದಲು ಒಪ್ಪಲಿಲ್ಲ. ಈ ವಿಚಾರ ಅವನ ಮಾತೆಗೆ ತಿಳಿಯಿತು. ಆಕೆ ಆಶಾಶಾಹನ ಬಾಲ್ಯವನ್ನು ನೆನಪಿಸಿದಳು. ಸಂಗ್ರಾಮ ಸಿಂಹನು ತನ್ನ ಪ್ರಾಣದ ಹಂಗು ತೊರೆದು ಅವನನ್ನು ರಕ್ಷಿಸಿದ ವಿಚಾರ ಹೇಳಿ "ಕೃತಘ್ನನಾಗಬೇಡ" ಎಂದು ಎಚ್ಚರಿಸಿದಳು. ತಾಯಿಯಿಂದ ಕತೆಯನ್ನು ತಿಳಿದ ಆಶಾಶಾಹನು ಉದಯಸಿಂಹನಿಗೆ ಆಶ್ರಯ ನೀಡಲು ಸಿದ್ಧನಾದ. ಅವನ ತಾಯಿಯು ಪನ್ನಾಳಿಗೆ ಭರವಸೆಯನ್ನಿತ್ತಳು. ತನ್ನ ಮೇಲೆ ಯಾವುದೇ ರೀತಿಯ ಸಂಶಯ ಬಾರದಂತೆ ತಾನು ಮೇವಾಡದಲ್ಲಿಯೇ ಇರಬೇಕಾಗಿದೆಯೆಂದು ಹೇಳಿ ತನ್ನೂರಿಗೆ ಹಿಂತಿರುಗಿದಳು ಆ ಮಹಾಸ್ವಾಮಿಭಕ್ತೆ ಪನ್ನೆ.

ಕಾಲ ಚಕ್ರ ಉರುಳತೊಡಗಿತು. ಹೋಳಿ ಹಬ್ಬಗಳು ರಾಗರಂಜಿತವಾಗಿ ಮೆರೆದವು. ಆಶಾಶಾಹನು ರಾಜಸಭೆಯಲ್ಲಿ ಈತನು ತನ್ನ ಅಣ್ಣನಮಗ ಎಂದು ಸಾರಿದ್ದ. ಆದರೆ, "ಸಟೆಯು ಕತ್ತಲೆ ಎಷ್ಟರ ತನಕ ನಿಲ್ಲಬಲ್ಲುದು". ಉದಯಸಿಂಹನ ತೇಜೋರಾಶಿ ಅವನ ಇರುವಿಕೆಯನ್ನು ಸಾರಿ ಹೇಳುತ್ತಿತ್ತು. ಮೆಲ್ಲಮೆಲ್ಲನೆ ಮುಂಜಾನೆಯ ಕೆಂಪು ಹರಡುವಂತೆಯೇ ಮೇವಾಡದ ಜನರಿಗೆ ಉದಯಸಿಂಹನ ಇರುವಿಕೆ ಅರ್ಥವಾಯಿತು. ಅವನನ್ನೇ ಸಿಂಹಾಸನಕ್ಕೆ ತರುವ ಪ್ರಯತ್ನ ನಡೆಯಿತು. ವನವೀರ ದಿಕ್ಕೆಟ್ಟು ಹೋದ. ಮೇವಾಡದ ವೀರ ಸೈನಿಕರು ವನವೀರನನ್ನು ಬಂಧಿಸಿ ಸೆರೆಯಲ್ಲಿಟ್ಟು ಉದಯಸಿಂಹನನ್ನು ಕರೆತಂದು ಪಟ್ಟದ ಮೇಲೆ ಕುಳ್ಳಿರಿಸಿದರು. ಪನ್ನಾಳ ತ್ಯಾಗದ ಕತೆ ಗೊತ್ತಾಯಿತು.

ವನವೀರನ ಹತ್ಯೆಗೆ ತಯಾರಿ ನಡೆಯಿತು. ಆದರೆ ದಯಾಮಯಿ ಪನ್ನಾಳು ಉದಯಸಿಂಹನೊಡನೆ "ಮಗೂ, ಮರಣ ಒಂದಲ್ಲ ಒಂದು ದಿನ ಎಲ್ಲರಿಗೂ ಬಂದೇ ಬರುತ್ತದೆ. ಅದು ಹತ್ತು ಜನರ ಹಿತಕ್ಕಾಗಿ ಆದರೆ ಒಳ್ಳೆಯದು. ರಕ್ತಹರಿಸಿದರೆ ವಾಸನೆ ಹೆಚ್ಚಾಗುತ್ತದೆ. ರಕ್ತದಿಂದ ರಕ್ತವನ್ನು ತೊಳೆಯಲಿಕ್ಕಾಗುವುದಿಲ್ಲ. ಕ್ಷಮಾದಾನಕ್ಕಿಂತ ಶ್ರೇಷ್ಠವಾದ ಶಿಕ್ಷೆ ಇನ್ನೊಂದಿಲ್ಲ. ನಿನ್ನ ಚಿಕ್ಕಪ್ಪನಾದರೋ ಅತುಲ ಪರಾಕ್ರಮಿ. ಚಂದ್ರಗುಪ್ತನ ಸೇವೆಯಲ್ಲಿ ನಿರತನಾದ ಅಮಾತ್ಯರಾಕ್ಷಸನಂತೆ ಅವನೂ ನಿನ್ನ ಸೇವೆಯಲ್ಲಿ ಕಾಲಕಳೆಯಲಿ ಆಗ ನಮಗೆಲ್ಲ ಹಿತವಾಗುವುದು" ಎಂದಳು.

ಪನ್ನೆಯ ಮಾತುಗಳನ್ನು ಕೇಳಿದ ಉದಯಸಿಂಹನು "ಅಮ್ಮಾ, ನಿನ್ನಾಜ್ಞೆಯಂತೆ ನಡೆಯುವೆ. ನೀನು ಮನುಷ್ಯಳಲ್ಲ, ದೇವತೆ. ನಿನ್ನ ಮನಸ್ಸಿಗೆ ನೋವಾಗದಂತೆ ನಡೆಯುವುದೇ ನನ್ನ ಧರ್ಮ. ಮೇವಾಡವಿರುವತನಕ ನೀನು ನಡೆಸಿದ ಪವಾಡ ಜಾಗೃತವಾಗಿರುವುದು. ನಿನ್ನ ರಕ್ಷೆ ಎಂದೆಂದೂ ಇರಲಿ"ಎಂದನು.

ಹೀಗೆ ರಾಷ್ಟ್ರಪ್ರೇಮಿಗಳನ್ನು ಭಾರತ ಮಾತೆಗೆ ಕೊಟ್ಟ ರಜಪೂತ ಸ್ತ್ರೀಯರು ಎಂದೆಂದೂ ಸ್ಮರಿಸಲು ಅರ್ಹರಾಗಿದ್ದಾರೆ. ಅವರಲ್ಲಿ ಸ್ವಾಮಿಭಕ್ತೆ ಪನ್ನಾ ಜಗತ್ತಿನ ಹಿಂದು ಅನರ್ಘರತ್ನ.

*



# ಗೃಹಲಕ್ಷ್ಮಿ



# ಸಾವಿತ್ರೀ

ಉಪನಯನವಾಗುವ ಪ್ರತಿ ವಟುವಿಗೂ ಗಾಯತ್ರಿ ಮಂತ್ರವನ್ನು ಉಪದೇಶಿಸುತ್ತಾರೆ. ಗಯ (ಪ್ರಾಣ)ಗಳಿಗೆ ತ್ರಾಣ ನೀಡುವವಳು ಈ ದೇವತೆಯಾದ್ದರಿಂದ ಈಕೆಗೆ ಗಾಯತ್ರೀ ಎಂದು ಹೆಸರು.

ಇದು ಬ್ರಾಹ್ಮಣ್ಯದ ಜ್ಞಾನಶಕ್ತಿಯಾಗಿರುತ್ತದೆ. ಈ ದೇವತೆಗೆ ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬ ನಾಮಾಂತರಗಳೂ ಇವೆ. ಈ ದೇವತೆಯನ್ನು ಉಪಾಸನೆ ಮಾಡುವುದಕ್ಕೆ ಸಾಧನವಾದ ಒಂದು ಮಂತ್ರ ವಿಶೇಷಕ್ಕೂ ಇದೇ ಹೆಸರನ್ನು ನೀಡಲಾಗಿದೆ. ಆ ಮಂತ್ರವನ್ನು ಜಪ ಮಾಡುವುದರ ಮಹಿಮೆಯನ್ನು, ಗಾಯತ್ರೀ ಕವಚ ಹಾಗೂ ಸಹಸ್ರನಾಮಪುರಶ್ಚರಣಾದಿಗಳ ವಿವರಗಳನ್ನು ಮಹಾಭಾರತದ ಅಶ್ವಮೇಧಪರ್ವದಲ್ಲಿ ವಿವರಿಸಲಾಗಿದೆ.

ಸಾವಿತ್ರಿಯು ಬ್ರಹ್ಮನ ಪತ್ನಿ. ಈಕೆಯು ಆದ್ಯಾಶಕ್ತಿಯ ಪರಾ ಪ್ರಕೃತಿಯ ಐದು ರೂಪಗಳಲ್ಲಿ ಒಂದು — ಎಂದು ನಂಬಲಾಗಿದೆ.

ಗಣೇಶಜನನೀ ದುರ್ಗಾ
ರಾಧಾ ಲಕ್ಷ್ಮೀಃ ಸರಸ್ವತೀ ।
ಸಾವಿತ್ರೀ ಚ ಸೃಷ್ಟಿವಿಧೌ
ಪ್ರಕೃತಿಃ ಪಂಚಧಾ ಸ್ಮೃತಾ ॥

ಎಂಬ ಶ್ಲೋಕವೇ ಇದಕ್ಕೆ ಆಧಾರ.

ಸಾವಿತ್ರಿಯ ರೂಪವು ಹೊಳೆಯುತ್ತಿರುವ ಚಿನ್ನದಂತೆ ಪ್ರಜ್ವಲಿಸುತ್ತದೆ. ಮಧ್ಯಾಹ್ನದ ಸಮಯದಲ್ಲಿ ಈಕೆಯು ಸಹಸ್ರ ಸೂರ್ಯರಿಗೆ ಸಮಾನಳಾದ ತೇಜಸ್ವಿನಿಯಾಗಿರುವಳೆಂಬ ನಂಬಿಕೆ. ಈಕೆಯು ಸುಖದಾಯಿನಿ ಮತ್ತು ಮೋಕ್ಷದಾಯಿನಿಯೂ ಹೌದು. ಈಕೆಯು ವೇದಮಾತೆ ಗಾಯತ್ರಿಯೂ ಆಗಿರುವಳು.

ಪುರಾಣಗಳಲ್ಲಿ ಈಕೆಯ ಸೃಷ್ಟಿಯನ್ನು ಅನೇಕ ಪ್ರಕಾರಗಳಲ್ಲಿ ವಿವರಿಸಲಾಗಿದೆ. ಈಕೆಯು ನಿತ್ಯ ಸಿದ್ಧಿ ಪರಮೇಶ್ವರಿಯಾಗಿರುವಳು. ಸವಿತ (ಸೂರ್ಯ)ನ ಮಗಳಾದುದರಿಂದ ಈಕೆಯ ಹೆಸರು ಸಾವಿತ್ರಿ ಎಂದಾಯಿತು— ಎಂದೂ ಹೇಳಲಾಗುತ್ತದೆ. ಸವಿತನ ಮುಖದಿಂದ ಈಕೆಯು ಪ್ರಾದುರ್ಭಾವವಾಯಿತು. ನಂತರ ಆತನು ಈಕೆಯ ವಿವಾಹವನ್ನು ಬ್ರಹ್ಮನೊಂದಿಗೆ ನೆರವೇರಿಸಿದನು. ಅಂದಿನಿಂದ ಈಕೆಯ ಹೆಸರು ಬ್ರಾಹ್ಮಣಿ ಎಂದಾಯಿತು.

ಅಲ್ಲಲ್ಲಿ ಸಾವಿತ್ರೀ ಮತ್ತು ಗಾಯತ್ರಿಯರ ಬೇರೆ ಬೇರೆ ವರ್ಣನೆಗಳು ಇರುವುದನ್ನು ನಾವು ಕಾಣಬಹುದು.

ಪುಷ್ಕರವು ಏಳು ಮಹಾದ್ವೀಪಗಳಲ್ಲಿ ಒಂದು. ಬ್ರಹ್ಮನ ವಿಖ್ಯಾತ ತೀರ್ಥಸ್ಥಾನವಾದ ಇದೇ ಹೆಸರಿನ ಸರೋವರವು ಇದರಲ್ಲಿದೆ. ಇಲ್ಲಿ ಬ್ರಹ್ಮನು ಒಂದು ಮಹಾಯಜ್ಞವನ್ನು ಮಾಡಲು ಪ್ರಾರಂಭಿಸಿದನು. ಯಜ್ಞಕಾರ್ಯಗಳಿಗೆ ಈತನ ಜ್ಯೇಷ್ಠ ಪತ್ನಿಯಾದ ಸಾವಿತ್ರಿಯನ್ನು ಕರೆಯಲಾಯಿತು. ಆದರೆ ಆಕೆ ಬರುವುದರಲ್ಲಿ ವಿಳಂಬವಾಯಿತು.

ಆದುದರಿಂದ ಬ್ರಹ್ಮನ ಚಿಕ್ಕ ಹೆಂಡತಿಯಾದ ಗಾಯತ್ರಿಯನ್ನು ಬ್ರಹ್ಮನ ಜೊತೆಯಲ್ಲಿ ಕೂಡಿಸಿ, ಯಜ್ಞ ಕಾರ್ಯವನ್ನು ಸೂಕ್ತ ಸಮಯದಲ್ಲಿ ಪ್ರಾರಂಭಿಸಿ ಮುಂದುವರಿಸಲಾಯಿತು.

ನಂತರ ಬಂದ ಸಾವಿತ್ರಿಯು ಇದನ್ನು ಗಮನಿಸಿ, ತನ್ನ ಅಧಿಕಾರವನ್ನು ಗಾಯತ್ರಿಯು ಅಪಹರಿಸಿದಳು ಎಂದು ಭಾವಿಸಿ, ಕೋಪಗೊಂಡು, ಒಂದು ಪರ್ವತಶಿಖರದ ಮೇಲೆ ಹೋಗಿ ಕುಳಿತಳು. ನಂತರ ದೇವತೆಗಳೆಲ್ಲರೂ ಆಕೆಯನ್ನು ಸ್ತುತಿಸಿ, ಪ್ರಸನ್ನಳಾಗುವಂತೆ ಮಾಡಿದರು.

ಇಂದಿಗೂ ಪುಷ್ಕರದಲ್ಲಿ ಇವರೀರ್ವರ ಮೂರ್ತಿಗಳೂ ಕಂಡುಬರುತ್ತವೆ. ಆದರೂ ಇವೆರಡೂ ರೂಪಗಳು ಬ್ರಹ್ಮನ ಒಂದೇ ಶಕ್ತಿಯ ಬೇರೆ ರೂಪಗಳಾಗಿವೆ ಆದುದರಿಂದ ಅಭಿನ್ನರೆಂದೇ ಇವರನ್ನು ಕಾಣಬೇಕು. 'ಗಾಯತ್ರೀ ಮೇವ ಸಾವಿತ್ರೀ ಮನುಭ್ರೂಯಾತ್' ಎನ್ನುವ ಉಪನಿಷದ್ ವಾಕ್ಯವು ಇವರ ಅಭಿನ್ನತೆಯನ್ನು ಸ್ಪಷ್ಟಪಡಿಸುತ್ತದೆ.



ಸಾವಿತ್ರಿಯು ಜ್ಞಾನ–ವಿಜ್ಞಾನಗಳ ಸಾಕಾರ ರೂಪಳಾಗಿದ್ದಾಳೆ. ಸೃಷ್ಟಿಯ ಆದಿಯಲ್ಲಿ ಪ್ರಾದುರ್ಭೂತರಾದ ಸನಕಾದಿಗಳು ಈಕೆಯ, ಬ್ರಹ್ಮನ ಮಾನಸಪುತ್ರರೆಂದು ಹೇಳಲಾಗಿದೆ. ಈಕೆಯು ಪರಬ್ರಹ್ಮಸ್ವರೂಪಿಣಿಯಾಗಿರುವಳು. ವೇದ, ಉಪನಿಷತ್ ಮತ್ತು ಪುರಾಣಗಳಲ್ಲಿ ಈಕೆಯ ಮಹಿಮೆಯ ವಿಸ್ತೃತ ವರ್ಣನೆ ಇದೆ.

ಮೊದಲು ಸಾವಿತ್ರಿಯು ಗೋಲೋಕಧಾಮದಲ್ಲಿ ರಾಧೆಯೊಂದಿಗೆ ಇರುತ್ತಿದ್ದಳು. ಶ್ರೀಕೃಷ್ಣನು ಈಕೆಯನ್ನು ಬ್ರಹ್ಮನ ಕೈಗೆ ನೀಡಿದ. ಆಗ ಆಕೆಯು ಗೋಲೋಕವನ್ನು ಬಿಟ್ಟು ಹೋಗಲು ಇಷ್ಟಪಡಲಿಲ್ಲ, ಸಿದ್ಧಳೂ ಇರಲಿಲ್ಲ. ಆಗ ಶ್ರೀಕೃಷ್ಣನ ಆಜ್ಞೆಯ ಮೇರೆಗೆ ಬ್ರಹ್ಮನು ವೇದಮಾತೆ ಸಾವಿತ್ರಿಯನ್ನು ಭಕ್ತಿಪೂರ್ವಕವಾಗಿ ಪ್ರತಿಷ್ಠಾಪಿಸಿದನು. ಇದರಿಂದ ಸಂತುಷ್ಟಳಾದ ಸಾವಿತ್ರಿಯು ಬ್ರಹ್ಮನಿಗೆ ತನ್ನ ಪ್ರೇಮವನ್ನು ಸಮರ್ಪಿಸಿದಳು. ಆತನೊಂದಿಗೆ ಬ್ರಹ್ಮಲೋಕವನ್ನು ಸೇರಿದಳು, ಅಲ್ಲಿಯೇ ಇರತೊಡಗಿದಳು. ಅಲ್ಲಿ ಈಕೆಯು ತನ್ನ ತನು, ಮನ, ವಾಣಿಗಳಿಂದ ಬ್ರಹ್ಮನ ಸೇವೆ ಮಾಡಿದಳು. ತನ್ನ ಅವಿಚಲ ಪಾತಿವ್ರತ್ಯದ ಪ್ರಭಾವದಿಂದ ಮೂರು ಲೋಕಗಳಿಗೂ ಪೂಜ್ಯಳಾದಳು.

ಭದ್ರದೇಶದ ರಾಜನಾದ ಅಶ್ವಪತಿಯು ಕಠೋರ ತಪಸ್ಸು ಮಾಡಿ, ಈಕೆಯನ್ನು ಸಂತುಷ್ಟಗೊಳಿಸಿ, ಈಕೆಯ ಕೃಪೆಯಿಂದ ಸಾವಿತ್ರಿಯಂತಹವಳೇ ಆದ ಮಗಳನ್ನು ಪಡೆದ. ಮುಂದೆ ಇದೇ ಕನ್ಯೆಯು ತನ್ನ ಪಾತಿವ್ರತ್ಯದ ಪ್ರಭಾವದಿಂದ ಯಮರಾಜನನ್ನು ಗೆದ್ದು, ಮೂರು ಲೋಕಗಳಿಗೂ ಆದರ್ಶಪ್ರಾಯಳಾದಳು.

ರಘುಸುತ

ಸಾವಿತ್ರಿಯ ಉಪಾಸನೆಯನ್ನು ಮೂರು ಕಾಲ ಗಳಲ್ಲೂ ಮಾಡುತ್ತಾರೆ ಸಂಧ್ಯಾವಂದನೆಯ ಮುಖಾಂತರ ಇದನ್ನು ಪ್ರತಿಯೊಬ್ಬರೂ ನೆರವೇರಿ ಸುತ್ತಾರೆ. ಮೂರು ಕಾಲಗಳಲ್ಲೂ ಈಕೆಯ ಬೇರೆ ಬೇರೆಯಾದ ಪ್ರಾರ್ಥನೆ, ಧ್ಯಾನಶ್ಲೋಕ ಗಳಿವೆ.

ಪ್ರಾತಃಕಾಲದಲ್ಲಿ ಈಕೆಯು ಸೂರ್ಯ ಮಂಡಲದ ಮಧ್ಯದಲ್ಲಿ ವಿರಾಜಮಾನಳಾಗಿರು ತ್ತಾಳೆ. ಈ ಸಮಯದಲ್ಲಿ ಈಕೆಯ ಶರೀರದ ಬಣ್ಣವು ಕೆಂಪುವರ್ಣದ್ದಾಗಿರುತ್ತದೆ. ತನ್ನ ಎರಡೂ ಕೈಗಳಲ್ಲಿ ಅಕ್ಷಸೂತ್ರ ಮತ್ತು ಕಮಂಡಲಗಳನ್ನು ಧರಿಸಿರುತ್ತಾಳೆ. ಹಂಸಪಕ್ಷಿಯು ಈಕೆಯ ವಾಹನ ವಾಗಿರುತ್ತದೆ. ಕುಮಾರಿಯಾಗಿಯೆ ಕಾಣಿಸಿ ಕೊಳ್ಳುವಳು. ಈ ಸ್ವರೂಪವು 'ಬ್ರಹ್ಮಶಕ್ತಿ ಗಾಯತ್ರಿ' ಎಂಬ ಹೆಸರಿನಿಂದ ಪ್ರಸಿದ್ಧವಾದುದು. ಈ ವರ್ಣನೆಯು ಋಗ್ವೇದದಲ್ಲಿ ದೊರೆಯುತ್ತದೆ.

ಮಧ್ಯಾಹ್ನ ಕಾಲದಲ್ಲಿ ಈಕೆಯು ಯುವತಿ ಯಂತೆ ಕಂಡುಬರುವಳು. ಚತುರ್ಭುಜಗಳನ್ನು ಹೊಂದಿದ್ದು, ತ್ರಿನೇತ್ರಧಾರಿಣಿಯಾಗಿರುವಳು. ಶಂಖ, ಚಕ್ರ, ಗದೆ ಮತ್ತು ಪದ್ಮಗಳು ಈಕೆಯ ನಾಲ್ಕೂ ಕೈಗಳಲ್ಲಿ ಶೋಭಾಯಮಾನವಾಗಿರು ತ್ತವೆ. ಈ ಸಮಯದಲ್ಲಿ ಗರುಡನು ಈಕೆಯ ವಾಹನವಾಗಿರುತ್ತಾನೆ. ವಿಷ್ಣುವನ್ನು ದೇವರೆಂದು ನಂಬುವ ವೈಷ್ಣವೀ ಶಕ್ತಿಯ ರೂಪವೇ ಇದು. ಈ ವರ್ಣನೆಯು ಯಜುರ್ವೇದದಲ್ಲಿ ದೊರೆಯುತ್ತದೆ. ಈ ಸಮಯದ ಈಕೆ ಹೆಸರು 'ಸಾವಿತ್ರಿ' ಎಂದು

ಸಾಯಂಕಾಲದ ಸಮಯದಲ್ಲಿ ಗಾಯತ್ರಿಯು ವೃದ್ಧೆಯಂತೆ ಕಂಡುಬರುವಳು. ವೃಷಭದ ಮೇಲೆ ಕುಳಿತು, ರುದ್ರಶಕ್ತಿಯ ರೂಪದಲ್ಲಿ ಕಾಣಿಸಿ ಕೊಳ್ಳುವಳು. ಶರೀರದ ವರ್ಣವು ಶುಕ್ಲ ರೂಪದ್ದಾಗಿರುತ್ತದೆ. ತನ್ನ ನಾಲ್ಕು ಭುಜಗಳಲ್ಲಿ ತ್ರಿಶೂಲ, ಡಮರು, ಪಾಶ ಮತ್ತು ಪಾತ್ರೆಗಳನ್ನು ಧರಿಸಿರವಳು. ಈ ಸ್ವರೂಪವನ್ನು 'ಸರಸ್ವತಿ' ಎಂದು ಕರೆಯಲಾಗುತ್ತದೆ ಇದರ ವರ್ಣನೆ 'ಸಾಮವೇದ'ದಲ್ಲಿ ದೊರೆಯುತ್ತದೆ.

ಈ ರೀತಿಯಲ್ಲಿ ಗಾಯತ್ರಿ, ಸಾವಿತ್ರಿ, ಸರಸ್ವತಿಯರು ಬ್ರಹ್ಮಶಕ್ತಿಯ ಒಂದೇ ಹೆಸರಿನ ಬೇರೆ ಬೇರೆ ರೂಪಗಳಾಗಿವೆ ಪ್ರಣವ, ವೇದ, ವ್ಯಾಹೃತಿ, ವೇದಾಂಗ, ಶಾಸ್ತ್ರ, ಪುರಾಣ ಮತ್ತು ಇತಿಹಾಸ–ಇತ್ಯಾದಿ ಎಲ್ಲ ಸಾಹಿತ್ಯಾಂಗಗಳೂ ಈಕೆಯ ಮೂಲ ಸ್ವರೂಪವೇ ಆಗಿವೆ. ಇವುಗಳ ಅಧಿಷ್ಠಾತ್ರಿದೇವಿ ಈಕೆಯೇ ಆಗಿರುವಳು.

ಈಕೆಯ ಶಕ್ತಿಯ ಸಹಾಯದಿಂದ ಬ್ರಹ್ಮನು ಸೃಷ್ಟಿಯ ಕಾರ್ಯವನ್ನು ನಡೆಸುತ್ತಾನೆ. ಮೇಲೆ ತಿಳಿಸಿದ ಮೂರು ರೂಪಗಳನ್ನೂ ಭಕ್ತರು ಪೂಜಿಸು ವಂತೆ ಮಾಡಿದ್ದಾನೆ.

ಈಕೆಯನ್ನು ಬ್ರಾಹ್ಮಿ, ಭಾರತಿ ಮತ್ತು ವಾಣೀ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಬುದ್ಧಿಯ ಅಧಿಷ್ಠಾತ್ರಿಯೂ ಹೌದು

ಅವಧದ ರಾಜನಾದ ಧ್ರುವಸಂಧಿಯ ಪುತ್ರನ ಹೆಸರು ಸುದರ್ಶನ ಎಂದು. ಇವನ ಸವತಿ ತಾಯಿಯ ಮಗನ ( ತಮ್ಮನ ) ದುಷ್ಟಕೂಟಕ್ಕೆ ಬಲಿಯಾಗಿ, ಇವನನ್ನು ಇವನ ತಾಯಿಯ ಸಹಿತ, ಆ ದೇಶದಿಂದ ಹೊರದೂಡಲಾಯಿತು. ಹೀಗೆ ಅನಾಥರಾದ ಇವರಿಬ್ಬರೂ ಬೃಹತ್ ಅರಣ್ಯವನ್ನು ಹೊಕ್ಕರು. ಅಲ್ಲಿ ಓರ್ವ ಮಹರ್ಷಿಯ ಆಶ್ರಮ ದಲ್ಲಿ ಇರತೊಡಗಿದರು. ಸುದರ್ಶನನ ಪಾಲನೆ, ಪೋಷಣೆ ಅಲ್ಲಿಯೇ ಆಗತೊಡಗಿತು.

ಅಲ್ಲಿ ಸುದರ್ಶನನು ಇತರೇ ಋಷಿ ಬಾಲಕ ರೊಡನೆ ಆಟವಾಡುತ್ತಾ ಬೆಳೆಯತೊಡಗಿದನು. ಒಂದು ದಿನ ಓರ್ವ ಬಾಲಕನು ಆಟದ ಸಮಯ ದಲ್ಲಿ ಸುದರ್ಶನನನ್ನು 'ಕ್ಲೀಬ' (ನಪುಂಸಕ, ಹೇಡಿ) ಎಂದು ಕರೆದ.

ಸುದರ್ಶನನಿಗೆ ಈ ಪದದ ಅರ್ಥ ಗೊತ್ತೀ ಇರಲಿಲ್ಲ ಆದರೂ ಈ ಪದದ ದೋಷ ಅವನಲ್ಲಿ ಹೆಚ್ಚಾಯಿತು. ಆದರಿಂದ ಈ ಪದವನ್ನು ಪದೇ ಪದೇ ಹೇಳಿಕೊಳ್ಳತೊಡಗಿದ. ಹಾಗೆ ಹೇಳಿಕೊಳ್ಳು ತ್ತಿದ್ದಂತೆ ಈ ಪದದ ಸ್ವರೂಪವು ಬದಲಾಗಿ 'ಕ್ಲೀಮ್' ಎಂದಾಯಿತು.

ಈ 'ಕ್ಲೀಮ್' ಎನ್ನುವ ಪದವು ಸರಸ್ವತೀ ದೇವಿಯ ಬೀಜಮಂತ್ರವಾಗಿದೆ. ಇದು ಸುದರ್ಶ ನನಿಗೆ ತಿಳಿಯದು. ಇದರ ಸ್ವರೂಪಾರ್ಥವನ್ನು ತಿಳಿಯದ ಸುದರ್ಶನನು ಅದನ್ನೇ ಜಪಿಸತೊಡಗಿದ. ಇದರಿಂದ ದಯಾಮಯಳಾದ ಸರಸ್ವತಿಯು ಸಂಪ್ರೀತಳಾದಳು ಆಕೆಯು ಈ ಬಾಲಕನ ಮೇಲೆ ಕೃಪಾದೃಷ್ಟಿಯನ್ನು ಬೀರಿದಳು. ಆದರಂತೆ ಇವನಿಗೆ ಅದ್ಭುತ ಬಲ, ಬುದ್ಧಿ ಮತ್ತು ವಿದ್ಯೆಗಳನ್ನು ಅನುಗ್ರಹಿಸಿದಳು

ಇದರ ಆಧಾರದ ಮೇಲೆ ಪ್ರವರ್ಧಮಾನನಾದ ಸುದರ್ಶನನು ಮುಂದೆ ಕಾಶೀರಾಜನ ಪುತ್ರಿಯಾದ ರಾಜಕುಮಾರಿ ಶಶಿಕಲಳನ್ನು ಮದುವೆಯಾದನು.

ದೇವಿಯು ಸ್ವಯಂ ಪ್ರತ್ಯಕ್ಷಳಾಗಿ ಸುದರ್ಶನನ ಶತ್ರುಗಳನ್ನು ದಮನ ಮಾಡಿದ್ದೇ ಅಲ್ಲದೆ ಅವ ನನ್ನು ಮತ್ತೆ ಅವಧರಾಜ ಸಿಂಹಾಸನದ ಮೇಲೆ ಕೂರಿಸಿದಳು

ಮಹಾಸರಸ್ವತಿಯು ರಕ್ತಬೀಜ ಇತ್ಯಾದಿ ದಾನವರೊಂದಿಗೆ ಯುದ್ಧಮಾಡುತ್ತಿದ್ದಳು, ಆ ಸಮಯದಲ್ಲಿ ಬ್ರಹ್ಮಶಕ್ತಿಯಾದ ಸಾವಿತ್ರೀ ದೇವಿಯು ಹಂಸಪಕ್ಷಿಯ ಮೇಲೆ ಕುಳಿತು, ಕಮಂಡಲವನ್ನು ಧರಿಸಿ, ಅಲ್ಲಿಗೆ ಬಂದಳು. ಕೂಡಲೆ ತನ್ನ ಮಂತ್ರಪೂತ ಕಮಂಡಲದ ಜಲ ದಿಂದ ಆಕೆಯು ಅನೇಕ ದೈತ್ಯರನ್ನು ಸಂಹಾರ ಮಾಡಿದಳು. ಈ ರೀತಿಯಲ್ಲಿ ದುಷ್ಟ ಶಿಕ್ಷಣದಲ್ಲಿ ಅನುಪಮ ಸಹಾಯಮಾಡಿದಳು.

ಬ್ರಹ್ಮಾಣಿ ಮಂತ್ರಪೂತೇನ
ತೋಯೇನಾನ್ಯೆ ನಿರಾಕೃತಾಃ।

(ವಿವಿಧ ಮೂಲಗಳಿಂದ)

(14ನೇ ಪುಟದಿಂದ)

'ಶ್ರೀಂ' ಎಂಬ ಅಕ್ಷರವನ್ನು ಸೇರಿಸಿದರೆ ಷೋಡಶಾಕ್ಷರಿ ಮಂತ್ರವಾಗುವುದೆಂದು ಹೇಳಲಾಗಿದೆ.

ಲಲಿತೆ ಹಾಗೂ ಕಾಮೇಶ್ವರರೇ ಸ್ವತಃ ರಚಿಸಿದ ಷೋಡಶಾಕ್ಷರಿ ಸ್ತುತಿಯು ಲಲಿತೆಯ ಆಜ್ಞಾನುಸಾರವಾಗಿ ವಾಗ್ದೇವಿಯು ರಚಿಸಿದ ಲಲಿತಾ ಸಹಸ್ರನಾಮಕ್ಕೆ ಪೂರಕವಾಗಿದೆ. ಇದರ ಜಪವು ಸರ್ವ ಕ್ರಿಯೆಯ ದೋಷವನ್ನು ಪರಿಹರಿಸಿ ಉಪಾಸನೆಯನ್ನು ಪೂರ್ತಿಮಾಡುವುದು. ಆದುದರಿಂದ ದೇವಿಯೇ ಈ ಸ್ತುತಿಗೆ "ಸರ್ವಪೂರ್ತಿಕರ" ವೆಂಬ ಹೆಸರನ್ನು ಕೊಟ್ಟಿರುತ್ತಾಳೆಂದು ಶ್ರೀ ಲಲಿತಾತ್ರಿಶತೀನಾಮ ಸ್ತೋತ್ರದ ಪೂರ್ವ ಪೀಠಿಕಾಪ್ರಕರಣದಲ್ಲಿ ಉಲ್ಲೇಖವಾಗಿದೆ. ಭಾವ ಗರ್ಭಿತವಾದ ಈ ಮಂತ್ರವು ಅತ್ಯಂತ ರಹಸ್ಯವಾದುದು. ಇದನ್ನು ಮೂಲತಃ ಲಲಿತೋಪಾಸನೆಯ ಉಪದೇಶ ಪಡೆದ ಅಗಸ್ತ್ಯಮುನಿ ಹಾಗೂ ಉಪದೇಶಿಸಿದ ಹಯಗ್ರೀವಮುನಿ ಇವರ ಕೆಳಗಣ ಸಂವಾದದಿಂದ ತಿಳಿಯಬಹುದು :

ಹಯಗ್ರೀವ ಮುನಿಯಿಂದ ಲಲಿತಾಸಹಸ್ರನಾಮವನ್ನು ತಿಳಿದುಕೊಂಡ ನಂತರ ಅಗಸ್ತ್ಯನಿಗೆ ಅಷ್ಟಕ್ಕೇ ತೃಪ್ತಭಾವ ಉಂಟಾಗದೆ ಏನೋ ಒಂದು ಅಸಂಪೂರ್ಣತೆಯ ಭಾವ ಮನಸ್ಸಿನಲ್ಲಿ ಮೂಡುವುದು. ಆಗ ಆತನು ಗುರು ಹಯಗ್ರೀವನ ಪಾದಗಳನ್ನು ಹಿಡಿದುಕೊಂಡು ಪ್ರಣಾಮಮಾಡಿ ದೇವಿಯ ಉಪಾಸನೆಯ ಬಗ್ಗೆ ಇನ್ನಾವುದಾದರೂ ಅಂಶ ಉಳಿದಿದ್ದರೆ ಅದನ್ನು ಉಪದೇಶಿಸಬೇಕೆಂದು ಪ್ರಾರ್ಥಿಸುವನು. ಪೂರ್ವದಲ್ಲಿ ಲಲಿತಾಂಬಿಕೆಯು ಹಯಗ್ರೀವನಿಗೆ ಮಾಡಿದ್ದ ಆಜ್ಞೆಯ ಪ್ರಕಾರ ಪಂಚದಶಾಕ್ಷರಿ ಮಂತ್ರವನ್ನು ರಹಸ್ಯವಾಗಿ ತನ್ನಲ್ಲಿಯೇ ಇಟ್ಟುಕೊಂಡಿರಬೇಕಾಗಿದ್ದುದರಿಂದ ಇದನ್ನು ಆತನು ಅಗಸ್ತ್ಯನಿಗೆ ಹೇಳುವಂತಿರಲಿಲ್ಲ. ಆದುದರಿಂದ ಅಗಸ್ತ್ಯನನ್ನು ಸಮಾಧಾನಗೊಳಿಸಲು ಬೇರೆ ಮಾತುಗಳನ್ನು ಹೇಳತೊಡಗುವನು. ಆದರೆ, ಅಗಸ್ತ್ಯನು ಗುರುವಿನ ಪಾದಗಳನ್ನು ಬಿಡಲೊಲ್ಲನು. ತನ್ನ ಮನಸ್ಸಿನಲ್ಲಿದ್ದ ಅಸಂಪೂರ್ಣತೆಯ ಭಾವವನ್ನು ಗುರುವೇ ನೀಗಿಸಬಲ್ಲನೆಂಬ ನಂಬಿಕೆ ಹಾಗೂ ಹಾಗೆ ನೀಗಿಸಿಕೊಳ್ಳುವ ದೃಢಸಂಕಲ್ಪ ಅಗಸ್ತ್ಯನದು. ಇಂತಹ ದೃಢಸಂಕಲ್ಪಮಾಡಿದ್ದ ಶಿಷ್ಯ ಮತ್ತು ಹಿಡಿದ ಪಾದಗಳನ್ನು ಬಿಡದ ಶಿಷ್ಯನ ಧೋರಣೆಯಿಂದ ಚಿಂತಾಕ್ರಾಂತನಾದ ಹಯಗ್ರೀವಮುನಿ – ಇಬ್ಬರೂ ಹೀಗೆಯೇ ನಿಂತು ಮೂರುವರ್ಷಗಳು ಕಳೆಯುವುವು. ಆಗ ಲಲಿತೆಯು ಕಾಮೇಶ್ವರನೊಡಗೂಡಿ ಹಯಗ್ರೀವನಿಗೆ ರಹಸ್ಯವಾಗಿ ಪ್ರತ್ಯಕ್ಷಳಾಗುತ್ತಾಳೆ ಮತ್ತು ಅಗಸ್ತ್ಯನು ತನ್ನಲ್ಲಿ ಅಚಲವಾದ ಭಕ್ತಿಯುಳ್ಳವನಾದುದರಿಂದಲೂ, ಈತನ ಪತ್ನಿ ಲೋಪಾಮುದ್ರೆಯು ಅಷ್ಟೇ ಅಚಲವಾದ ಭಕ್ತಿಯಿಂದ ತನ್ನನ್ನು ಉಪಾಸಿಸುತ್ತಾಳೆಯಾದುದರಿಂದಲೂ, ಅಗಸ್ತ್ಯನಿಗೆ ಅತಿ ರಹಸ್ಯವಾದ ಷೋಡಶಾಕ್ಷರಿ ಮಂತ್ರವಿದ್ಯೆಯನ್ನು ಕಲಿಸಬೇಕೆಂದು ಹಯಗ್ರೀವನಿಗೆ ಆಜ್ಞಾಪಿಸಿ ದೇವಿಯು ಅಂತರ್ಧಾನಳಾಗುತ್ತಾಳೆ. ಇದರಿಂದ ಸಂತೋಷಭರಿತನಾದ ಹಯಗ್ರೀವನು ಅಗಸ್ತ್ಯನನ್ನು ಹಿಡಿದೆಬ್ಬಿಸಿ ಕುಳ್ಳಿರಿಸಿ, ನಿನ್ನಿಂದ ನನಗೆ ಲಲಿತಾಕಾಮೇಶ್ವರರ ದರ್ಶನಲಾಭವಾಯಿತೆಂದೂ, 'ನಿನ್ನ ಮನಸ್ಸಿನ ಅತೃಪ್ತಿಯನ್ನು ಹೋಗಲಾಡಿಸಿ ಮನಃಶಾಂತಿಯುಂಟುಮಾಡಲು ಸರ್ವೋತ್ಕೃಷ್ಟವಾದ 'ಸರ್ವಪೂರ್ತಿಕರ' ಎಂಬ ಸ್ತುತಿಯನ್ನು ನಿನಗೆ ಕಲಿಸಬೇಕೆಂದು ದೇವಿಯ ಆಜ್ಞೆಯಾಗಿದೆಯೆಂದೂ' ತಿಳಿಸಿ ಈ ಸ್ತುತಿಯನ್ನು ಕುರಿತು ಹೀಗೆ ಹೇಳುವನು. 'ಜಪಾರ್ಹವಾದ ಈ ಸ್ತೋತ್ರವು ಪಂಚದಶಾಕ್ಷರೀ ಮಂತ್ರದ 'ಕ' ಕಾರವೇ ಮೊದಲಾದ ವರ್ಣಗಳಿಂದ ಕ್ರಮವಾಗಿ ಬೇರೆಬೇರೆ ಇಪ್ಪತ್ತು ನಾಮಗಳಿಂದ ಹೇಳಲ್ಪಟ್ಟಿದೆ; ಇವೆಲ್ಲವನ್ನೂ ಸೇರಿಸಿದರೆ ಸರ್ವ ಸಂಪೂರ್ತಿಕರವಾದ ಶ್ರೀ ಲಲಿತಾತ್ರಿಶತೀ ನಾಮಸ್ತೋತ್ರವಾಗುವುದು. ಇವುಗಳು ನಾಮರೂಪದಲ್ಲಿದ್ದರೂ ಶ್ರೇಷ್ಠವಾದ ಜಪಮಂತ್ರಗಳಾಗಿವೆ. ಅಲ್ಲದೆ ಈ ಪಂಚದಶಾಕ್ಷರಿ ಮಂತ್ರವು ಅತಿ ರಹಸ್ಯವಾದುದು. ಆದುದರಿಂದ ಇದನ್ನು ಗೋಪ್ಯವಾಗಿಟ್ಟುಕೊಂಡಿರಬೇಕು' ಎಂದು ಆಜ್ಞಾಪಿಸಿ ಶ್ರೀಲಲಿತಾತ್ರಿಶತಿಯ ಮುನ್ನೂರು ನಾಮಮಂತ್ರಗಳನ್ನು ಅಗಸ್ತ್ಯನಿಗೆ ಉಪದೇಶಿಸುವನು. ಇವುಗಳಲ್ಲಿ ಶಿವವರ್ಣಗಳಿಂದ— ಅಂದರೆ ಮೂರು 'ಕ' ವರ್ಣಗಳು, ಎರಡು 'ಹ' ಕಾರಗಳು— ಪ್ರಾರಂಭವಾಗುವ ನಾಮಗಳು ಶ್ರೀದೇವಿಯಿಂದಲೂ, ಶಕ್ತಿ ಅಕ್ಷರಗಳಿಂದ—ಅಂದರೆ ಏ, ಈ, ಮೂರು 'ಲ'ಕಾರ ಎರಡು 'ಸ'ಕಾರ – ಪ್ರಾರಂಭವಾಗುವ ನಾಮಗಳು ಕಾಮೇಶ್ವರನಿಂದಲೂ, 'ಹ್ರೀಂ'ಕಾರದಿಂದ ಪ್ರಾರಂಭವಾಗುವ ನಾಮಗಳು ಉಭಯತ್ರರಿಂದಲೂ ರಚಿಸಲ್ಪಟ್ಟಿವೆ ಎಂದು ಹೇಳಲಾಗಿದೆ.

ಹದಿನೈದು ಮಾತೃಕೆಗಳಿಂದ ಕೂಡಿರುವ ಪಂಚದಶಾಕ್ಷರಿ ಮಂತ್ರವನ್ನು ಮೂರು ಕೂಟಗಳಾಗಿ ವಿಂಗಡಿಸಲಾಗಿದೆ. ಅಗ್ನಿ ಅಧಿಪತಿಯಾಗಿರುವ ವಾಗ್ಭವಕೂಟ, ಸೂರ್ಯ ಅಧಿಪತಿಯಾಗಿರುವ ಕಾಮರಾಜಕೂಟ, ಸೋಮ ಅಧಿಪತಿಯಾಗಿರುವ ಶಕ್ತಿಕೂಟ – ಇವೇ ಈ ಮೂರು ಕೂಟಗಳು. ಈ ಮೂರು ಕೂಟಗಳ ಜೊತೆಗೆ ವಿಶೇಷ ರಹಸ್ಯವಾದ 'ಶ್ರೀಂ' ಅಕ್ಷರ ಕೂಡಿರುವ ನಾಲ್ಕನೆಯ ಕೂಟವನ್ನು ಸೇರಿಸಿದರೆ ಪಂಚದಶಾಕ್ಷರಿಯು ಷೋಡಶಾಕ್ಷರಿ ಮಂತ್ರವಾಗುತ್ತದೆ. ದೇವಿಯ ಸೂಕ್ಷ್ಮಶರೀರವೇ ಆಗಿರುವ ಈ ಮಂತ್ರವು ಜಪಾರ್ಹವಾದ ಶಾಕ್ತರ ಗಾಯತ್ರೀ ಮಂತ್ರವಾಗಿದೆ. ಪಂಚದಶಾಕ್ಷರಿ ಮಂತ್ರವನ್ನು ಜಪಿಸಿ ಸಹಸ್ರನಾಮವನ್ನು ಪಠಿಸಬೇಕೆಂದು ಶ್ರೀ ಲಲಿತಾ ಸಹಸ್ರನಾಮ ಸ್ತೋತ್ರ ಪ್ರಾರಂಭದ ಪೂರ್ವ ಭಾಗದಲ್ಲಿ ಹೇಳಲಾಗಿದೆ.

ಲಲಿತಾಸಹಸ್ರನಾಮದಲ್ಲಿ ಪಂಚದಶಾಕ್ಷರಿ ಸೂಚ್ಯವಾದ ಕೆಲವು ನಾಮಗಳು ಇವು:– ಶ್ರೀ ಮದ್ವಾಗ್ಭವ ಕೂಟೈಕ ಸ್ವರೂಪಮುಖ ಪಂಕಜಾ (೮೫); ಕಂಠಾಧಃಕಟಿಪರ್ಯಂತ ಮಧ್ಯಕೂಟ ಸ್ವರೂಪಿಣೀ (೮೬); ಶಕ್ತಿಕೂಟೈಕ ತಾಪನ್ನ ಕಟ್ಯಧೋಭಾಗಧಾರಿಣೀ (೮೭); ಮೂಲಮಂತ್ರಾತ್ಮಿಕಾ (೮೮); ಮೂಲಕೂಟತ್ರಯ ಕಲೇಬರಾ (೮೯); ಸರ್ವಮಂತ್ರ ಸ್ವರೂಪಿಣೀ (೨೦೪); ಮಾತೃಕಾವರ್ಣರೂಪಿಣೀ (೫೭೭); ಶ್ರೀ ಷೋಡಶಾಕ್ಷರೀ ವಿದ್ಯಾ (೫೮೭); ತ್ರಿಕೂಟಾ (೫೮೮). ★

---

(16ನೇ ಪುಟದಿಂದ)

ದಲ್ಲಿರುವ ಮಂಟಪದಲ್ಲಿಯ ಪ್ರತಿಯೊಂದು ಕಂಬವೂ ಒಂದೊಂದು ಸ್ವರವನ್ನೀಯುತ್ತದೆ, ಹೀಗಾಗಿ ಇಡೀ ಮಂಟಪವೇ ಸಪ್ತಸ್ವರದಿಂದ ನಿನಾದಿಸುವಂತೆ ತೋರುತ್ತದೆ. ಇದೊಂದು ನೂತನ ಶೈಲಿಯೆಂದೇ ಹೇಳಬಹುದು. ವಿಜಯವಿಠಲನಂತಹ ಇನ್ನೂ ಅನೇಕ ದೇವಾಲಯಗಳು ಹಂಪೆಯಲ್ಲಿ ಕಾಣಬರುತ್ತಿದ್ದರೂ ಅವುಗಳಲ್ಲಿ ಸಂಗೀತಮಾಧುರ್ಯವನ್ನು ಮಾತ್ರ ನಾವು ಕಾಣಲಾರೆವು. ಈ ಹಿನ್ನೆಲೆಯನ್ನು ಅಭ್ಯಾಸ ಮಾಡಿದ ದಿವಂಗತ ಮ.ನ. ಮೂರ್ತಿಯವರು ಕರ್ನಾಟಕ ಸಂಗೀತಕ್ಕೆ ಕುಲಪಿತಾಮಹರೆಂದು ಖ್ಯಾತರಾದ ಪುರಂದರದಾಸರೇ ಈ ಸಪ್ತಸ್ವರ ಮಂಟಪದ ರಚನೆಗೆ ಕಾರಣಪುರುಷರೆಂದು ಊಹೆ ಮಾಡಿದ್ದಾರೆ.

'ವಾತಾಪಿ ಗಣಪತಿಂ ಭಜೇ' ಎಂದು ರಚಿತವಾದ ಗಣಪತಿಯ ಸ್ತೋತ್ರಕ್ಕೂ ಇಂದಿನ ಬಾದಾಮಿಗೂ ಯಾವುದೋ ವಿಶೇಷ ಸಂಬಂಧವಿರುವಂತೆ ತೋರಿಬರುತ್ತವೆ. ಇತ್ತೀಚೆಗೆ ಐಹೊಳೆಯಲ್ಲಿ ದೊರೆತ ದ್ವಿಭುಜಯುಕ್ತ ಗಣಪತಿಯ ವಿಗ್ರಹವೇ ಈ ಕೃತಿಗೆ ಸ್ಫೂರ್ತಿಯನ್ನಿತ್ತಿರಬಹುದೇ? ದಿವಂಗತ ತಿ.ತಾ. ಶರ್ಮರು ವಾತಾಪಿಯಲ್ಲಿದ್ದ ಗಣಪತಿಯನ್ನೇ ಮುಖ್ಯವಾಗಿಟ್ಟುಕೊಂಡು ಈ ಕೃತಿ ರಚಿಸಿದರೆಂದು ಹೇಳಿದ್ದಾರೆ.

ಕನ್ನಡ ನಾಡಿನುದ್ದಕ್ಕೂ ಸಾವಿರಾರು ಸಂಖ್ಯೆಯಲ್ಲಿ ಹರಡಿಕೊಂಡಿರುವ ಪ್ರಾಚೀನ ಶಿಲ್ಪಕಲೆಯಲ್ಲಿ ಸಂಗೀತದ ಆವಿರ್ಭಾವವನ್ನು ಹೊಂದಿದ ವಿಗ್ರಹಗಳನ್ನು ಹಾಗೂ ಆ ವಿಗ್ರಹಗಳು ಬಳಸಿದ ಸಂಗೀತ ಸಾಧನಗಳನ್ನು ಕುರಿತು ಅಭ್ಯಾಸಮಾಡಿದಲ್ಲಿ ಅದು ಮುಂದಿನ ಪೀಳಿಗೆಗೆ ಮಾರ್ಗದರ್ಶನವನ್ನೀಯಬಹುದಾದ ಬೃಹದ್ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ.


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

(10 ನೇ ಪುಟದಿಂದ)

ಯಾವ ನಿನ್ನ ವಿಭೂತಿಯಲ್ಲಿ, ಅಂತರ್ಗತವಾಗಿ ರುವುದೋ, ಯಾವ ನಿನ್ನ ಭ್ರೂಭಂಗಿಗಳು ಮನ್ಮಥನಂತೆ ಪ್ರಪಂಚ ವ್ಯವಹಾರ ನಿರ್ವಾಹಕ ವಾಗಿರುವುವೋ, ಮೇರುಧನನಾದ ಮಹಾಪುಷನೂ ನಿನ್ನ ಕಿಂಕರನೇ ಆಗಿರುವನೋ. ಯಾವ ವಿಭೂತಿಯಲ್ಲಿರುವ ಇಂದ್ರನು ಐಶ್ವರ್ಯದಿಂದ ನೂರಾರು ಕಣ್ಣುಗಳಿಂದ ನೋಡಲ್ಪಡುತ್ತಿ ರವನೋ, ಅಂತಹ ಇವೆಲ್ಲವೂ ನಿನ್ನ ಕಿಂಚಿದನು ಗ್ರಹದಿಂದ ಉಂಟಾದ ವಿಭೂತಿಯ ಪರಂಪರೆ ಗಳೇ ಆಗಿವೆ.

ಶ್ರೀಸ್ತುತಿಯು ಬಹುಚಿತ್ತಾಕರ್ಷಕವಾಗಿಯೂ ಭಕ್ತಿ, ಉತ್ಸಾಹ ಹುಟ್ಟಿಸುವ ಕೃತಿಯೂ ಆಗಿದೆ.

ಮಾತಾ ದೇವಿ ತ್ವಮಸಿ
ಭಗವಾನ್ವಾಸುದೇವಃ ಪಿತಾ ಮೇ
ಜಾತಃ ಸೋಹಂ ಜನನಿ
ಯುವಯೋ ರೇಕಲಕ್ಷ್ಯಂ ದಯಾಯಾಃ
ದತ್ತೋಯುಷ್ಮತ್ಪರಿ
ಜನತಯಾ ದೇಶಿಕೈರಪ್ಯತಸ್ತ್ವಂ
ಕಿಂ ತೇ ಭೂಯಃ ಪ್ರಿಯ
ಮಿತಿ ಕಿಲ ಸ್ಮೇರವಕ್ತ್ರಾ ವಿಭಾಸಿ ॥

ಹೇ! ಲಕ್ಷ್ಮೀ ದೇವಿಯೇ!! ನಿರುಪಾಧಿಕ ವಾತ್ಸಲ್ಯದಿಂದ ನೀನು ನನಗೆ ತಾಯಿಯೇ ಆಗಿರುವೆ. ನಿನ್ನ ಪತಿಯಾದ ವಾಸುದೇವನು ನಿರ್ವ್ಯಾಜ ಹಿತಾಸಕ್ತಿಯಿಂದ ನನಗೆ ತಂದೆ ಆಗಿರುವನು. ಈ ರೀತಿ ನಿಮ್ಮಿಬ್ಬರ ದಯೆಗೂ ನಾನು ಲಕ್ಷ್ಯನಾಗಿದ್ದೇನೆ. ನಿಮ್ಮ ಪರಿಜನ ಸೇವೆ ಯನ್ನು ನಡೆಸಲು ನನ್ನನ್ನು ನನ್ನ ಆಚಾರ್ಯರು ನಿಮಗೆ ಕೊಟ್ಟು ಇದ್ದಾರೆ. ಈ ರೀತಿ ಎಲ್ಲ ಪುರುಷಾರ್ಥಗಳನ್ನು ಹೊಂದಿದ್ದರೂ, ವಾತ್ಸಲ್ಯ ಗುಣನಿಧಿಯಾದ ನೀನು ನನಗೆ ಪ್ರಿಯವಾದದ್ದು ಇನ್ನೇನು ಬೇಕು ಎಂದು ಕೇಳುವುದಕ್ಕೋ ಎಂಬಂತೆ ಮಂದಹಾಸಯುಕ್ತವಾದ ಮುಖ ಕಮಲದಿಂದ ಬೆಳಗುತ್ತಿದ್ದೀಯೆ.

ವೇದಾಂತದೇಶಿಕರ ಎಲ್ಲ ಸ್ತೋತ್ರಗಳೂ ಅರ್ಥ ವತ್ತಾಗಿಯೂ, ಕರ್ಷಯುತವಾಗಿಯೂ, ಭಕ್ತಿ ಪ್ರಚೋದಕವೂ ಆಗಿರುವುವಲ್ಲದೆ, ಪ್ರಾರ್ಥನಾ ರೂಪವಾಗಿಯೂ ಇವೆ. ಅವುಗಳನ್ನೆಲ್ಲ ಸ್ಥಳಾವಕಾಶದಿಂದ ವಿಚಾರಮಾಡುವುದು ಸಾಧ್ಯ ವಿಲ್ಲವಾಗಿವೆ. ಕೊನೆಯದಾಗಿ ಅತ್ಯಂತ ವೈಭವ ಪೂರಿತವಾದ ಆಲೋಚನಾಪರವಾದ ದಯಾಶತಕ ಸ್ತೋತ್ರದ ವಿಷಯ ನೋಡೋಣ.

ವೇದಾಂತದೇಶಿಕರು ತಿರುಪತಿಯಲ್ಲಿದ್ದಾಗ ಶ್ರೀನಿವಾಸಸ್ವಾಮಿಯ ದಿವ್ಯಮಂಗಳವಿಗ್ರಹವನ್ನು ದರ್ಶನಮಾಡುತ್ತಿದ್ದಾಗ, ಭಗವಂತನ ಅನಂತ ಕಲ್ಯಾಣಗುಣಗಳಲ್ಲಿ ಪ್ರಧಾನವಾದ ದಯಾಗುಣ ವನ್ನು ಸಂಬೋಧಿಸಿ ಪದ್ಯರೂಪದ ಸ್ತೋತ್ರವಿದ ನೂರಾರು ಶ್ಲೋಕಗಳನ್ನು ದಯಾಶತಕದಲ್ಲಿ ರಚಿಸಿದ್ದಾರೆ. ಇದರ ಪ್ರತಿದಶಕವೂ ಬೇರೆ ಬೇರೆ ವೃತ್ತದಲ್ಲಿದೆ. ಒಂದೊಂದು ದಶಕದಲ್ಲಿಯೂ ಕವಿ ವರ್ಯರು ಒಂದೊಂದು ವಿಷಯವನ್ನು ಪ್ರತಿಪಾದಿ ಸಿದ್ದಾರೆ. ಅವು ಕ್ರಮವಾಗಿ ಹೀಗಿವೆ-ಭಗವಂತನ ಮೋಕ್ಷಪ್ರದಾತೃತ್ವ, ಸರ್ವಜ್ಞತ್ವ, ಅನಿಷ್ಟ ನಿವಾರ ಕತ್ವ, ಸೌಲಭ್ಯ, ಮೋಕ್ಷಮಾರ್ಗದರ್ಶಿತ್ವ, ಪ್ರಪತ್ತಿ ಆಗತ್ಯ, ದಯಾರಸದ ಮಹಿಮೆ, ಅವ ತಾರ ವರ್ಣನೆ, ಮತ್ತು ಮೋಕ್ಷಸ್ವರೂಪ

ಭಗವಂತನ ಅಸಾಧಾರಣ ಗುಣವಾದ ದಯೆಗೆ ಪ್ರಾಶಸ್ತ್ಯಕೊಟ್ಟಿದ್ದಾರೆ. ಪರಮಾತ್ಮನ ದಯೆ ಯನ್ನು ಕುರಿತು ಕವಿಯ ಹೃದಯದಿಂದ ನಿರರ್ಗಳ ವಾಗಿ ಹೊರಹೊಮ್ಮಿದ ಭಾವಗೀತೆ ದಯಾಶತಕ, ಪರಮಾತ್ಮನ ಕರುಣೆ ಅಥವ ದಯೆಯಿಂದ ಆವೇಶ ಪೂರಿತರಾಗಿ, ವೇದಾಂತದೇಶಿಕರು ತಮ್ಮ ಮನಸ್ಸಿ ನಲ್ಲಿ ತಟ್ಟನೆ ಆವಿರ್ಭವಿಸಿದ ಎಲ್ಲ ಭಾವನೆಗಳನ್ನೂ ಬಹು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ.

ದಯಾಶತಕದ ಕಥಾವಸ್ತು ಹೀಗಿದೆ. ತನ್ನನ್ನೇ ತಾನು ಪರಮಾತ್ಮನಿಗೆ ಅರ್ಪಿಸಿಕೊಳ್ಳಬೇಕೆಂ– ದಿರುವ ಆತ್ಮನ ಪ್ರಾರ್ಥನೆ ಇದು. ಸ್ವಾಭಿಮಾನ ವನ್ನು ಯಾರು ಕಡ್ಡಾಯವಾಗಿ ತ್ಯಜಿಸುವರೋ, ಅಥವ ತನ್ನನ್ನೇ ತಾನು ಪರಮಾತ್ಮನಿಗೆ ವಿನಾಸ ಲಾಗಿಟ್ಟುಕೊಂಡು ಹಾರ್ದಿಕವಾಗಿ ಪ್ರಾರ್ಥಿ ಸುವರೋ ಅಂತಹವನ ಕೂಗು ಈ ಸ್ತೋತ್ರ ದಲ್ಲಿದೆ. ಪರಮಾತ್ಮನಲ್ಲಿ ಅಡಗಿರುವ ಭಾವನಾ ರೂಪ ಅಸ್ತಿತ್ವವನ್ನು ದಯೆ ಎಂದು ಕವಿವರ್ಯರು ಕಲ್ಪಿಸಿಕೊಂಡಿದ್ದಾರೆ. ತಮ್ಮ ಎಲ್ಲ ಗ್ರಹಣ ಶಕ್ತಿ ಯಿಂದ, ಅವನ್ನು ತಮ್ಮ ಕಣ್ಣ ಮುಂದೆ ಚಿತ್ರಿಸಿ ಕೊಳ್ಳುವ ಸಾಮರ್ಥ್ಯದಿಂದ ಪರಮಾತ್ಮನ ದಯೆ ಯನ್ನು ತಮ್ಮ ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ತಮಿಳುನಾಡಿನ ಆಳ್ವಾರರ ಮಾರ್ಗವನ್ನು ಕವಿವರ್ಯರು ಅನುಸರಿಸಿ ತಮ್ಮ ಮನಸ್ಸಿನ ಆವೇಗವನ್ನು ತಡೆಯಲಾರದೆ ಪರಮಾತ್ಮನ ದಯೆಯ ವಿಷಯವಾಗಿ ತಮ್ಮ ಅಸದೃಶರೀತಿಯ ಮನೋಭಾವನೆಯನ್ನು ಈ ಸ್ತೋತ್ರದಲ್ಲಿ ಹೊರಗೆಡಹಿದ್ದಾರೆ. ತಿರುಪತಿಯ ತಿರುಮಲೆಯೇ ಪೂರ್ಣವಾಗಿ ಶ್ರೀ ವೆಂಕಟೇಶ್ವರ ಸ್ವಾಮಿ ದಯೆಯ ರೂಪದಲ್ಲಿ ಘನೀಭೂತ ಸ್ವರೂಪ ವಾಗಿ ಬಂದು ಎದುರಿಗೆ ನಿಂತಿದೆಯೋ ಎಂದು ಭಾವಿಸಿದ್ದಾರೆ

ದಿವ್ಯ ದಯೆಯನ್ನು ಕುರಿತು ಆಚಾರ್ಯರು ಪ್ರಾರ್ಥಿಸುತ್ತಿರುವಾಗ ರೂಪಕಾವ್ಯಲಂಕಾರ ಒಂದರಮೇಲೊಂದು ಅವರ ಸ್ಮೃತಿಪಥದಲ್ಲಿ ಓಡಿ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನ ಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸು ವವರು ಕೆಳಗಣ ಸೂಚನೆಗಳನ್ನು ಗಮ ನಿಸಬೇಕು.

1) ಲೇಖನಗಳು ಅರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯ ಗಳ ಬರಹಗಳು ತತ್ಸಂಬಂಧಿ ಫೋಟೋ ಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿ ನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟ ವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಆಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | " | 40-00 |
| 3. | ಪುಳಿಯೋಗರೆ | " | 50-00 |
| 4. | ಪೊಂಗಲುಂ | " | 55-00 |
| 5. | ಸಕ್ಕರಪೊಂಗಲ್ | " | 65-00 |
| 6. | ಶಾಕರ ಭಾತ್ | " | 85-00 |
| 7. | ಕೇಸರೀ ಭಾತ್ | " | [illegible]0-00 |
| 8. | ಸೀರ | " | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಬರುತ್ತವೆ. ಹೀಗಿರುವಾಗ ಅವರ ಭಾವಾವೇಶಕ್ಕೆ ಕಲ್ಪನಾಶಕ್ತಿ ಮೆರುಗಿಡುವುದೋ, ಅಥವ ಅವರ ಕಲ್ಪನಾಶಕ್ತಿಗೆ ಭಾವಾವೇಶ ಮೆರುಗಿಡುವುದೋ ಎಂಬುದನ್ನು ನಿರ್ಧರಿಸುವುದು ಕಷ್ಟ. ತಮ್ಮ ಭಕ್ತಿ ಪರವಶತೆಯ ಭಾವಾವೇಶದಲ್ಲಿ ಪರಮ ಕರುಣಾಳುವಾದ ಪರಮಾತ್ಮನ ದಯೆಯನ್ನು ಕುರಿತೇ ಸ್ತೋತ್ರಮಾಡಿದ್ದಾರೆ. ದಯೆಯು ಭಗವಂತನ ಕಲ್ಯಾಣಗುಣಗಳಲ್ಲಿ ಮುಖ್ಯವಾದುದರಿಂದ ಅದೇ ಅವರಿಗೆ ಸರ್ವಸ್ವವಾಗಿದೆ. ಕೊನೆಗೆ ಸರ್ವಶ್ರೇಷ್ಠನಾದ ಪರಮಾತ್ಮನ ವ್ಯಕ್ತಿತ್ವಪ್ರಭಾವವೇ ದಯೆಯಾಗಿ ಪರಿಣಮಿಸುತ್ತದೆ. ಸ್ವಾಮಿಯು ಅವಳಿಗೆ ಅಧೀನವಾಗಿರುವಂತೆ ತೋರುತ್ತದೆ. ದಿವ್ಯಶಕ್ತಿಗಳೂ, ಸಂದರ್ಭಗಳೂ ಎಲ್ಲವೂ ಅನುಚರರಂತೆ ಅವಳನ್ನು ಸೇವಿಸಲು ಸಿದ್ಧವಾಗಿರುವುವು.

ವೇದಾಂತದೇಶಿಕರು ದಿವ್ಯ ದಯೆಯನ್ನು ಪ್ರಕೃತಿಯೊಡನೆ ಹೋಲಿಸಿರುವ ದೃಶ್ಯ ಅತಿ ಮನೋಹರವಾಗಿದೆ. ಪರಮಾತ್ಮನ ಸರ್ವೋತ್ತಮ ಗುಣಕ್ಕೂ ಮಳೆಯನ್ನು ತರುವ ವರ್ಷಋತುವಿಗೂ ಸಾದೃಶ್ಯವನ್ನು ಸ್ಥಾಪಿಸಲಾಗಿದೆ. ಇಡೀ ಜಗತ್ತು ಪರಮಾತ್ಮನ ಕೃಷಿಕ್ಷೇತ್ರ. ಜಗತ್ತಿನ ಚೇತನಾಚೇತನಗಳೆಲ್ಲವೂ ಪರಮಾತ್ಮ ಪ್ರಯೋಜನ ಅಥವ ಉಪಯುಕ್ತತೆಯ ಬೀಜರೂಪದಿಂದ ಹೊರಟ ಮೊಳಕೆಗಳು. ಯಾವಾಗ ಪರಮಾತ್ಮನ ದಯೆ ಎಂಬ ವರ್ಷಾಕಾಲವು ಪ್ರಾರಂಭವಾಗುವುದೋ ಆಗ ಅವನ ಅನುಗ್ರಹವೆಂಬ ಮಳೆಯು ಸುರಿಯುವುದು. ಆಗ ದಿವ್ಯ ಕೃಷಿಕಾರನು ಸಂತೋಷದಿಂದ ಆನಂದಹೊಂದಿ ಕುಣಿದಾಡುವನು. ಇದರಿಂದ ಉಂಟಾದ ಸುಗ್ಗಿ ಯಾವುದೆಂದರೆ ಜನತೆಯಲ್ಲಿ ವೃದ್ಧಿ ಹೊಂದುವ ದಿವ್ಯಗುಣ

ದೇವಾಲಯದಲ್ಲಿರುವ ದಿವ್ಯಮಂಗಳ ವಿಗ್ರಹ ದೃಷ್ಟಿಯು ಮಾನವ ಹೃದಯದಲ್ಲಿರುವ ಆತ್ಮನ ಕಡೆಗೆ ಹೋಗುವಂತೆ ದಿವ್ಯದಯೆಯು ಮಾಡುತ್ತಾಳೆಂದು ಆಚಾರ್ಯರು ವಿವರಿಸಿದ್ದಾರೆ. ಇಡೀ ಪ್ರಕೃತಿಯನ್ನು ಚಿತ್ರಪಟದಂತೆಯೂ, ದಯೆಯನ್ನು ಕುಂಚದಂತೆಯೂ, ಪರಮಾತ್ಮನನ್ನು ವರ್ಣಕರ್ಮಿಯಂತೆಯೂ ಭಾವಿಸಿಕೊಂಡು ಆಚಾರ್ಯರು ಸ್ತೋತ್ರಮಾಡಿದ್ದಾರೆ. ಮಳೆಗಾಲವನ್ನು ದಿವ್ಯ ದಯೆಯಂತೆ ಕಲ್ಪಿಸಿ, ಆ ಮಳೆಯಲ್ಲಿ ಪರಮಾತ್ಮನನ್ನು ನೃತ್ಯಮಾಡುವ ನವಿಲೋ ಎಂಬಂತೆ ವರ್ಣಿಸಲಾಗಿದೆ. ಪರಮಾತ್ಮನ ಆಗ್ರಹವನ್ನು ಕಡಮೆ ಮಾಡುವುದಕ್ಕೆ ದಯೆಯು ಸಹಾಯ ಮಾಡುವಳೆಂದು ವರ್ಣಿಸಲಾಗಿದೆ.

ಫಲವಿತರಣ ದಕ್ಷಂ ಪಕ್ಷಪಾತಾನಭಿಜ್ಞಂ
ಪ್ರಗುಣ ಮನುವಿಧೇಯಂ
ಪ್ರಾಪ್ಯ ಪದ್ಮಾ ಸಹಾಯಂ।
ಮಹತಿ ಗುಣಸಮಾಜೇ
ಮಾನಪೂರ್ವಂ ದಯೇ ತ್ವಂ
ಪ್ರತಿವದಸಿ ಯಥಾರ್ಹಂ
ಪಾಪ್ಮನಾಂ ಮಾಮಕಾನಾಂ ॥

ವೇದಾಂತದೇಶಿಕರು ಪಶ್ಚಾತ್ತಾಪ ಬುದ್ಧಿಯಿಂದ ದಯೆಯ ಮುಂದೆ ನಿಲ್ಲುತ್ತಾರೆ. ಪರಮಾತ್ಮನ ಅನಂತ ಕಲ್ಯಾಣಗುಣಗಳಲ್ಲಿ ಅವರಿಗೆ ಅಪಾರ ನಂಬಿಕೆ. "ಹೇ! ಜಗನ್ಮಾತೆ! ದಯಾದೇವಿ, ನಾನು ನಿನ್ನ ಮುಂದೆ ನಿಂತಿರುವೆನು. ನಿನಗೆ ಅರ್ಪಿಸಲು ನನ್ನ ಪಾಪಗಳು, ಕಷ್ಟ ಸಂಕಟಗಳು ವಿನಹ ಮತ್ತೇನೂ ನನ್ನಲ್ಲಿ ಇಲ್ಲ. ನನ್ನನ್ನು ನೀನು ಸ್ವೀಕರಿಸುವೆಯಾ? ಅಥವ ನನ್ನ ಕಡೆ ನೋಡಲು ಹೆದರುವೆಯಾ? ನಿನ್ನ ಪುತ್ರನಿಗೆ ನಿರಾಶೆಯನ್ನುಂಟುಮಾಡುವಷ್ಟು ಕೆಟ್ಟವಳಲ್ಲ ನೀನು. ನಾನು ಅರ್ಪಿಸುವುದನ್ನು ನೀನು ಆನಂದದಿಂದ ಸ್ವೀಕರಿಸು. ನನ್ನ ಪಶ್ಚಾತ್ತಾಪಬುದ್ಧಿಗಾಗಿ ನೀನು ನನ್ನನ್ನು ಮುದ್ದಾಡುವೆ". ಕೊನೆಯಲ್ಲಿ ಹೀಗೆ ಹೇಳಲಾಗಿದೆ.

ಕಾಮಂ ಸಂತು ಮಿಥಃ
ಕರಂಬಿತಗುಣಾವದ್ಯಾನಿ ಪದ್ಯಾನಿ ನಃ
ಕಸ್ಯಾಸ್ಮಿನ್ ಶತಕೇ ಸದಂಬು
ಕತಕೇ ದೋಷಃಶ್ರುತಿಂ ಕ್ಷಾಮ್ಯತೇ।
ನಿಷ್ಪತ್ಯೂಹ ವೃಷಾದ್ರಿ
ನಿರ್ಝರಝರತ್ಕಾರಚ್ಛಲೇನೋಚ್ಚಲನ್
ದೀನಾಲಂಬನ ದಿವ್ಯದಂಪತಿ ದಯಾ
ಕಲ್ಲೋಲಕೋಲಾಹಲಃ ॥

ನನ್ನ ಪದ್ಯಗಳೆಲ್ಲವೂ ಗುಣದೋಷದಿಂದ ಸಂಕೀರ್ಣವಾಗಿದ್ದರೂ ಇರಬಹುದು. ಆದರೂ ಶೇಷಾದ್ರಿಯಿಂದ ನಿರ್ಬಾಧಕವಾಗಿ ನಾನಾಕಡೆಗೆ ಹರಿದು ಬರುತ್ತಿರುವ ಗಿರಿ ನದಿಗಳ ವ್ಯಾಜದಿಂದ ಉಕ್ಕಿ ಹರಿಯುತ್ತಿರುವ ದಿವ್ಯದಂಪತಿಗಳಾದ ಶ್ರೀನಿವಾಸನ ದಯಾಮಯ ಪ್ರವಾಹದ ತರಂಗಗಳ ಕೋಲಾಹಲಧ್ವನಿಯು, ಸತ್ಪುರುಷರ ಹೃದಯಶೋಧಕವಾದ ಈ ಪದ್ಮಶತಕದಲ್ಲಿ ಯಾವ ದೋಷ ಶ್ರುತಿಯನ್ನು ತಾನೆ ಸಹಿಸೀತು. ಅಂದರೆ ದಿವ್ಯ ದಯೆಯು ಅಪರಿಮಿತವಾದ ತರಂಗ ಧ್ವನಿಯಲ್ಲಿ ದೋಷವಾಣಿಯು ಅಂತರ್ಹಿತವಾಗಿ ಹೋಗುತ್ತದೆ.

ದಯಾಶತಕಸ್ತೋತ್ರವು ಇನ್ನೊಬ್ಬರಿಗೆ ಅನುಕರಿಸಲಾಗದಷ್ಟು ಮಾದರಿಯಾಗಿದೆ. ಇದು ಇದು ಬಹು ಸೊಗಸಾಗಿ, ಘನತರವಾಗಿ ರಚಿಸಲ್ಪಟ್ಟಿದೆ. ಸ್ತೋತ್ರ ಸಾಹಿತ್ಯದಲ್ಲಿ ಇದಕ್ಕೆ ಅತ್ಯುನ್ನತ ಸ್ಥಾನವಿದೆ. ★

# ಶುದ್ಧಾದ್ವೈತ

ಶ್ರೀ ಶಂಕರರ ಅದ್ವೈತ ಸಿದ್ಧಾಂತವು ಅವರ ಮಾಯಾವಾದದೊಡನೆ ಮುಂದಿನ ತಲೆಮಾರಿನವರನ್ನು ನಿರುತ್ಸಾಹಿಗಳನ್ನಾಗಿಯೂ ಭಯಗ್ರಸ್ತರನ್ನಾಗಿಯೂ ಮಾಡಿತು. ಅವರ ಸಿದ್ಧಾಂತ ಪ್ರಕಾರ ಸಾಧಾರಣಮಟ್ಟದ ಜನಗಳಿಗೆ ಮೋಕ್ಷ ದೊರಕುವುದು ಕಷ್ಟವಾದುದಲ್ಲದೆ ವಾಸ್ತವ ಪ್ರಪಂಚದಿಂದ ಭಿನ್ನವಾದ ಅದ್ವೈತತತ್ತ್ವವನ್ನು ಅವರು ಜೀರ್ಣಿಸಿಕೊಳ್ಳುವುದೂ ಕಷ್ಟತರವಾಯಿತು. ಆದುದರಿಂದಲೇ ಮುಂದೆ ಬಂದ ರಾಮಾನುಜಾಚಾರ್ಯರೇ ಮೊದಲಾದವರು ಶಂಕರರ ಅದ್ವೈತ ಸಿದ್ಧಾಂತವನ್ನು ಖಂಡನಮಾಡಿ ಭಕ್ತಿ ಮತ್ತು ಪ್ರಪತ್ತಿ ಮಾರ್ಗಗಳನ್ನು ಉಪದೇಶಿಸಿ ಸಾಮಾನ್ಯಜನರ ಉದ್ಧಾರಕ್ಕೆ ಸರಳವಾದ ಮಾರ್ಗವನ್ನು ವಿಶದಪಡಿಸಿದರು. ಈ ಪಂಥದಲ್ಲಿಯೇ ನಡೆದವರು ಮಧ್ವಾಚಾರ್ಯ, ನಿಂಬಾರ್ಕ, ವಲ್ಲಭ, ಚೈತನ್ಯ ಮೊದಲಾದ ಆಚಾರ್ಯರುಗಳು. ಇವರೆಲ್ಲರೂ ಭಕ್ತಿಯ ಒಂದೊಂದು ರೂಪವನ್ನು ಪ್ರತಿಪಾದನೆ ಮಾಡಿದರು. ಹೀಗೆ ಮಾಡುವುದರಲ್ಲಿ ಅವರು ಶಂಕರರನ್ನು ಖಂಡನೆಮಾಡುವುದು ಅನಿವಾರ್ಯವಾಯಿತು. ಹೀಗೆ ಮಾಡಿದವರಲ್ಲಿ ವಲ್ಲಭಾಚಾರ್ಯರೂ ಒಬ್ಬರು. ಇವರು ಶಂಕರರನ್ನು ನೇರವಾಗಿ ಖಂಡಿಸಿ ತಮ್ಮ ಶುದ್ಧಾದ್ವೈತವನ್ನು ಪ್ರತಿಪಾದಿಸಿದ್ದಾರೆ. ಶ್ರೀಕೃಷ್ಣನ ಆಜ್ಞೆಯ ಪ್ರಕಾರ ಈ ಪ್ರಪಂಚದಲ್ಲಿ ಅಗ್ನಿಯ ಅವತಾರ ರೂಪವಾಗಿ ಶಂಕರರ ವಾದಸರಣಿಯನ್ನು ಸರಿಪಡಿಸುವುದಕ್ಕಾಗಿಯೇ ತಾವು ಜನ್ಮತಾಳಿರುವುದಾಗಿ ತಮ್ಮ ಗ್ರಂಥಗಳಲ್ಲಿ ತಿಳಿಸಿದ್ದಾರೆ. ಇವರ ಸಿದ್ಧಾಂತದಲ್ಲಿರುವ ಶುದ್ಧಶಬ್ದವು ಅರ್ಥಪೂರ್ಣವಾಗಿದೆ. ಅವರ ಪ್ರಕಾರ ಉಪನಿಷತ್ತಿನಲ್ಲಿ ಪ್ರತಿಪಾದಿತವಾಗಿರುವ ಅದ್ವೈತವು ಮಾಯಾಸಂಬಂಧವಿಲ್ಲದೆ ನೇರವಾಗಿ ಶುದ್ಧವಾಗಿದೆ. ಕಾರಣಕಾರ್ಯಗಳೆರಡೂ ಶುದ್ಧವೂ ಸತ್ಯವೂ ಆಗಿರುವುವು ಸ್ಪಷ್ಟವೆಂಬುದು ಅವರ ಅಭಿಪ್ರಾಯ. ಇವರು ಇತರ ವೇದಾಂತಿಗಳು ಉಪಯೋಗಿಸಿಕೊಂಡಿರುವ ಉಪನಿಷತ್, ಬ್ರಹ್ಮಸೂತ್ರ ಮತ್ತು ಭಗವದ್ಗೀತೆಗಳೆಂಬ ಪ್ರಸ್ಥಾನತ್ರಯದೊಡನೆ ಭಾಗವತವನ್ನು ನಾಲ್ಕನೆಯ ಪ್ರಸ್ಥಾನವನ್ನಾಗಿ ಅಂಗೀಕಾರ ಮಾಡಿದ್ದಾರೆ. ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳು ಒಂದು ಗುಂಪಿಗೂ ಭಗವದ್ಗೀತೆ ಮತ್ತು ಭಾಗವತವು ಮತ್ತೊಂದು ಗುಂಪಿಗೂ ಸೇರಿವೆ. ಇವೆರಡೂ ಒಂದೇ ತತ್ತ್ವವನ್ನು ಪ್ರತಿಪಾದಿಸುತ್ತವೆ. ಭಾಗವತವು ವ್ಯಾಸರ ಅನುಭವ ರಸಾಯನವಾಗಿರುವುದರಿಂದ ಅದಕ್ಕೆ 'ಸಮಾಧಿಭಾಷೆ' ಎಂದು ಹೆಸರು. ಆದುದರಿಂದಲೇ ಅವರು ಅದನ್ನು ಪ್ರಸ್ಥಾನಗಳಲ್ಲಿ ಒಂದಾಗಿ ಅಂಗೀಕರಿಸಿರುವುದು. ಈ ಪ್ರಸ್ಥಾನ ಚತುಷ್ಟಯದಲ್ಲಿ ಉಕ್ತವಾಗಿರುವ ಉಪದೇಶಗಳನ್ನು ಸ್ಪಷ್ಟಪಡಿಸುವುದಕ್ಕಾಗಿ ಅವರು ಕೆಲವು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಅವರ ಬ್ರಹ್ಮಸೂತ್ರ, ಜೈಮಿನೀಯಸೂತ್ರ ಮತ್ತು ಭಾಗವತಗಳಿಗೆ ರಚಿಸಿರುವ ಭಾಷ್ಯಗಳು ಪ್ರಸಿದ್ಧವಾದುವು. ಆದರೆ ಅವು ಯಾವುವೂ ಪೂರ್ಣವಾಗಿ ಲಬ್ಧವಾಗಿಲ್ಲ. ಅವರ ಬ್ರಹ್ಮಸೂತ್ರ ಭಾಷ್ಯಕ್ಕೆ 'ಅಣುಭಾಷ್ಯ'ವೆಂದು ಹೆಸರು. ಅದು ೩-೨-೩೩ ರವರೆಗೆ ಮಾತ್ರ ಉಪಲಬ್ಧವಾಗಿದೆ. ಇದರ ಮುಂದಿನ ಭಾಗವು ಅವರ ದ್ವಿತೀಯ ಪುತ್ರರಾದ ವಿಠಲನಾಥರಿಂದ ಪೂರ್ಣವಾಗಿದೆ. ಅವರು ಮೊದಲು ಒಂದು ಬೃಹದ್ಭಾಷ್ಯವನ್ನು ರಚಿಸಿದ್ದಂತೆಯೂ ಅದರ ಸಂಗ್ರಹವೇ ಅಣುಭಾಷ್ಯವೆಂದೂ ಅವೆರಡೂ ನಾಶವಾಗುತ್ತಿದ್ದ ಕಾಲದಲ್ಲಿ ಈಗ ಉಳಿದಿರುವ ಭಾಗವನ್ನು ಮಾತ್ರ ಉಳಿಸಿಕೊಳ್ಳಲು ಸಾಧ್ಯವಾಯಿತೆಂದೂ ನಂಬಲಾಗಿದೆ. ಅವರ 'ಜೈಮಿನೀಸೂತ್ರವ್ಯಾಖ್ಯಾನ'ವು ಇನ್ನೂ ಅಮುದ್ರಿತ ಸ್ಥಿತಿಯಲ್ಲಿಯೇ ಇದೆ. ಅದು ಕೆಲವು ಭಾಗಗಳಲ್ಲಿ ಮಾತ್ರ ಉಪಲಬ್ಧವಾಗಿದೆ. ಅವರ ಭಾಗವತ-ವ್ಯಾಖ್ಯಾನವಾದ 'ಸುಬೋಧಿನಿ'ಯು ಅಂಶತಃ ಮಾತ್ರ ಸಿಕ್ಕಿದೆ. ಮೊದಲು ಮೂರು ಸ್ಕಂಧಗಳೂ ಆರನೆಯದರಲ್ಲಿ ಕೆಲವು ಭಾಗಗಳೂ ಹತ್ತನೆಯ ಸ್ಕಂಧವೂ ಹನ್ನೊಂದರಲ್ಲಿ ಏಕದೇಶವೂ, ಈಗ ಸಿಕ್ಕಿರುವ ಭಾಗಗಳು. ತಮ್ಮ ಪಂಥದ ತತ್ತ್ವಪ್ರತಿಪಾದಕವಾದ 'ತತ್ತ್ವದೀಪನಿಬಂಧ' ಎಂಬ ಗ್ರಂಥವು ಶಾಸ್ತ್ರಾರ್ಥ, ತತ್ತ್ವನಿರ್ಣಯ ಮತ್ತು ಭಾಗವತಾರ್ಥ ಎಂಬ ಭಾಗಗಳಲ್ಲಿ ಅವರಿಂದ ರಚಿತವಾಗಿವೆ. ತತ್ತ್ವಪ್ರತಿಪಾದಕಗಳಾದ ೧೬ ಲಘುಕೃತಿಗಳೂ ಏತತ್ಕೃತವಾಗಿವೆ. ಅವರು 'ಭಾಗವತಕ್ಕೆ' ಪರಮ ಪೂಜ್ಯಸ್ಥಾನವನ್ನಿತ್ತು ಅದರ ಸಪ್ತಾರ್ಥಗಳಾದ ಶಾಸ್ತ್ರ, ಸ್ಕಂಧ, ಪ್ರಕರಣ ಅಧ್ಯಾಯ, ವಾಕ್ಯ, ಪದ ಮತ್ತು ಅಕ್ಷರಗಳನ್ನು ಅಭ್ಯಾಸ ಮಾಡಿರುವವರಿಗೆ ಮೋಕ್ಷವು ಸಿದ್ಧವೆಂದು ಸಾರಿದ್ದಾರೆ. ಇವುಗಳ ಮೊದಲು ನಾಲ್ಕು ವಿಷಯಗಳು 'ಸುಬೋಧಿನಿ'ಯಲ್ಲಿಯೂ ವಿವರಿಸಲ್ಪಟ್ಟಿವೆ. ಇವರು ಉಪನಿಷತ್ತು ಮತ್ತು ಗೀತೆಗಳಿಗೆ ಬೇರೆ ಯಾವರೀತಿಯ ವ್ಯಾಖ್ಯಾನವನ್ನು ರಚಿಸಿಲ್ಲ. ಆದರೂ 'ಅಣುಭಾಷ್ಯ' ಮತ್ತು 'ತತ್ತ್ವದೀಪನಿಬಂಧ'ಗಳಲ್ಲಿ ಅನೇಕ ಉಪನಿಷದ್ವಾಕ್ಯಗಳ ಅರ್ಥವನ್ನು ವಿವೇಚಿಸಿದ್ದಾರೆ.

'ಅಣುಭಾಷ್ಯ'ಕ್ಕೆ ವಲ್ಲಭರ ಶಿಷ್ಯನಾದ ಪುರುಷೋತ್ತಮನಿಂದ 'ಭಾಷ್ಯಪ್ರಕಾಶ'ವೆಂಬ ವ್ಯಾಖ್ಯಾನವಿದೆ. ಗೋಪೇಶ್ವರನ 'ರಶ್ಮಿ'ಯು 'ಭಾಷ್ಯಪ್ರಕಾಶ'ದ ವ್ಯಾಖ್ಯಾನ. ಪುರುಷೋತ್ತಮನೇ 'ವೇದಾಂತಾಧಿಕರಣಮಾಲಾ' ಎಂಬ ಸ್ವತಂತ್ರ ಪ್ರಕರಣ ಗ್ರಂಥವನ್ನು ರಚಿಸಿದ್ದಾನೆ. ಈ ಪಂಥದ ಜಯಗೋಪಾಲನೆಂಬುವನು 'ತೈತ್ತಿರೀಯೋಪನಿಷದ್ಭಾಷ್ಯ'ವನ್ನೂ ಕೃಷ್ಣಚಂದ್ರನೆಂಬುವನು 'ಭಾವಪ್ರಕಾಶಿಕಾ' ಎಂಬ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದ್ದಾರೆ.

ವಲ್ಲಭರ ಪ್ರಕಾರ ಬ್ರಹ್ಮನೇ ಪರಾತ್ಪರ ವಸ್ತು 'ಸಚ್ಚಿದಾನಂದ ರಸಸ್ವರೂಪ'ನಾದವನು. ಈ ಗುಣಗಳೆಲ್ಲ ಸತ್ಯ, ಇವನಲ್ಲಿಗೆ ಮತ್ತಾರೂ ರಸವನ್ನು ಬ್ರಹ್ಮನಗುಣವನ್ನಾಗಿ ಅಂಗೀಕಾರಮಾಡಿಲ್ಲ ಈ ಬ್ರಹ್ಮನು ಸಗುಣ ನಿರ್ಗುಣಾತ್ಮಕನಾಗಿದ್ದಾನೆ. ಪ್ರಪಂಚದ ಸೃಷ್ಟಿ ಸ್ಥಿತಿಲಯಗಳಿಗೆ ಆತನೇ ಕಾರಣ. ಬ್ರಹ್ಮವು ಏಕವೂ ಅನಂತವೂ ಜೀವಿಗಳ ಅಂತರ್ಯಾಮಿಯಾಗಿಯೂ ಪ್ರಪಂಚದ ನಿಮಿತ್ತ ಮತ್ತು ಉಪಾದಾನ ಕಾರಣವೂ ಆಗಿದೆ. ಅದು ಪೂರ್ಣ, ಆದುದರಿಂದಲೇ ಪುರುಷೋತ್ತಮನೆಂಬುದಾಗಿ ಕರೆಯಲ್ಪಡುತ್ತದೆ. ಆನಂದಮಯವಾದ ಶರೀರದಿಂದ ಕೂಡಿದೆ. ಈ ದೃಷ್ಟಿಯಿಂದ ಈತ ಸಗುಣ, ಸಾಮಾನ್ಯ ಭೌತಜೀವಿಗಳ ಗುಣಗಳನ್ನು ಹೊಂದಿಲ್ಲವಾಗಿ ಅದು ನಿರ್ಗುಣ. ಆತ್ಮಗಳೂ ಸತ್ಯ ಮತ್ತು ಬ್ರಹ್ಮದ ಭಾಗಗಳೇ ಆಗಿ ಬೆಂಕಿಗೆ ಕಿಡಿಗಳಂತೆ ಅವನ ಏಕದೇಶವೇ ಆಗಿವೆ. ಅವು ಅಣುರೂಪದಲ್ಲಿರುತ್ತವೆ. ಬ್ರಹ್ಮಭಾಗವೇ ಆಗಿರುವುದರಿಂದ ಅವನಿಗಿಂತ ಭಿನ್ನವಲ್ಲ. ಅವೂ ಅವ್ಯಕ್ತಾನಂದದಿಂದ ಕೂಡಿದ ಬ್ರಹ್ಮನೇ ಆಗಿರುತ್ತವೆ. ಆತ್ಮ ಬ್ರಹ್ಮಗಳ ಮಧ್ಯೆ ಕಾಣುವ ಭೇದವೂ ಸಹಜವಲ್ಲ. ಬ್ರಹ್ಮನ ಇಚ್ಛಾಫಲವಾದುದು. ಮಾಯಾಜನ್ಯವಲ್ಲ. ಆದುದರಿಂದಲೇ ಅದಕ್ಕೆ ಶುದ್ಧಾದ್ವೈತವೆಂದು ಹೆಸರು. ಕೃಪಾಮಯನಾದ ಬ್ರಹ್ಮನೇ ಇಚ್ಛೆಯಿಂದ ಆತ್ಮಗಳಿಗೆ ತನ್ನಂತಿರುವ ಅನಂತವಾದ ಆನಂದಮಯವಾದ ಶರೀರವನ್ನು ತನ್ನ ಲೀಲೆಗಾಗಿ ಕೊಡಬಹುದು. ಆತ್ಮ ಬ್ರಹ್ಮ ಸಂಬಂಧವು ನಾಯಿಕಾನಾಯಕ ಸಂಬಂಧರೂಪವಾದುದು. ಆತನ ಕೃಪೆಯನ್ನು ಸಂಪಾದಿಸುವುದಕ್ಕೆ ಭಕ್ತಿ ಪ್ರಪತ್ತಿಗಳೇ ಸಾಧನ ಈ ಮಾರ್ಗಕ್ಕೆ 'ಪುಷ್ಟಿಮಾರ್ಗ' ವೆಂದು ಹೆಸರು. ಗೋಪೀಜನ

ಡಾ॥ ಎನ್. ಅನಂತರಂಗಾಚಾರ್

ವಲ್ಲಭನಾದ ಕೃಷ್ಣನೇ ಈ ಪಂಥದ ಆರಾಧ್ಯ ದೇವತೆ. ಈತನಿಗೆ ಗೋವರ್ಧನನಾಥ, ಶ್ರೀನಾಥ ಎಂಬವು ಪರ್ಯಾಯನಾಮಗಳು

ವಲ್ಲಭಾಚಾರ್ಯರಲ್ಲಿ ಇತರರು ನಿರೂಪಿಸಿರುವ ಕರ್ಮಜ್ಞಾನ ಭಕ್ತಿಮಾರ್ಗಗಳಿಂದ ಭಿನ್ನವಾದ ಪುಷ್ಟಿಮಾರ್ಗದ ಮತ್ತು ಬ್ರಹ್ಮಾನಂದವನ್ನು ಮೀರಿಸುವ ಸ್ವರೂಪಾನಂದದ ವಿವರಣೆಗಳು ಬಹು ಆಕರ್ಷಕವಾಗಿವೆ. ಈ ಪಂಥದ ಪ್ರಕಾರ ಅವ್ಯಾಜ ಕೃಪಾಮಯನಾದ ಈಶ್ವರನು ಸ್ವೇಚ್ಛೆಯಿಂದ ಆತ್ಮನನ್ನು ಉದ್ಧಾರಮಾಡಬೇಕೆಂದು ಅಪೇಕ್ಷೆಪಟ್ಟಾಗ ಆತ್ಮನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನಿಗೆ ತನ್ನಂತೆಯೇ ಇರುವ ದಿವ್ಯಶರೀರವನ್ನಿತ್ತು ಅವನೊಡನೆ ಅನಂತಕಾಲ ನಿತ್ಯಲೀಲೆಯಲ್ಲಿರುತ್ತಾನೆ. ಈ ಕಾರ್ಯಕ್ಕೆ ಅವನ ಸ್ವಂತ ಕೃಪೆಯಲ್ಲದೆ ಇನ್ನಾವುದೂ ಕಾರಣವಲ್ಲ. ತನ್ನ ಸ್ವಂತ ಸಾನ್ನಿಧ್ಯದಿಂದ ಆತ್ಮನಿಗುಂಟಾಗುವ ಆನಂದಕ್ಕೆ ಭಜನಾನಂದ ಅಥವಾ ಸ್ವರೂಪಾನಂದವೆಂದು ಹೆಸರು. ಈ ದಿವ್ಯಾನಂದವು ಯಾವ ಮನುಷ್ಯ ಪ್ರಯತ್ನದಿಂದಲೂ ಪಡೆಯಲು ಸಾಧ್ಯವಿಲ್ಲ. ಅದಕ್ಕೆ ಭಗವಂತನ ಕರುಣೆಯೊಂದೇ ಸಾಧನ, ಈ ಕೃಪೆಗೆ ಸಿದ್ಧಾಂತದಲ್ಲಿ 'ಪುಷ್ಟಿ'ಯೆಂದು ಹೆಸರು. ಈ ಸ್ಥಿತಿಯಲ್ಲಿ ಭಗವಂತನು ತನ್ನನ್ನು ಅವರ ಅಧೀನರನ್ನಾಗಿ ಮಾಡಿಕೊಂಡು ಅವರೊಡನೆ ಅವರ ಇಷ್ಟದಂತೆ ಸಂಶ್ಲೇಷಣವನ್ನುಂಟುಮಾಡಿಕೊಳ್ಳುತ್ತಾನೆ. ಈ ಪುಷ್ಟಿಮಾರ್ಗವು ಗೋಪಿಯರಿಂದ ಲೋಕಕ್ಕೆ ಪ್ರದರ್ಶಿತವಾಗಿದೆ. ಪುಷ್ಟಿಮಾರ್ಗದಲ್ಲಿರುವವರು ಈಶ್ವರನನ್ನು ಪತಿಯಂತೆ ಮಾತ್ರವಲ್ಲದೆ ತಮ್ಮ ಸರ್ವಸ್ವವೆಂದು ಭಾವಿಸಿ ಅವನಲ್ಲಿ ನಿಷ್ಕಾರಣವಾದ ಪ್ರೇಮವನ್ನು ತೋರ್ಪಡಿಸುತ್ತಾರೆ. ಆದರಿಂದ ಭಗವಂತನು ಅವರ ಅಧೀನನಾಗುತ್ತಾನೆ. ಈ ಸ್ವರೂಪಾನಂದವು ಬ್ರಹ್ಮಾನಂದವನ್ನು ಮೀರಿದುದು, ಶುದ್ಧಾದ್ವೈತದ ಈ ಮೋಕ್ಷಭಾವನೆಯು ಪರಮೋತ್ಕೃಷ್ಟವಾದುದು. ಅಲ್ಲದೆ ಈಶ್ವರನು ರಸಮಯನಾಗಿರುವನು. ರಸಗಳಲ್ಲೆಲ್ಲ ಶೃಂಗಾರವೇ ಪ್ರಧಾನವಾದುದು. ಈ ಶೃಂಗಾರದಲ್ಲಿಯೂ ಭಕ್ತರಾದವರು ಸಂಯೋಗ ಮತ್ತು ವಿಪ್ರಯೋಗ ಎಂಬ ಎರಡು ಅನುಭವಗಳನ್ನೂ ಉಳ್ಳವರಾಗುತ್ತಾರೆ. ಈಶ್ವರಸಾನ್ನಿಧ್ಯದಲ್ಲಿ ಅವರು ಸಂಯೋಗ ಶೃಂಗಾರವನ್ನು ಅವನ ಅಸಾನ್ನಿಧ್ಯದಲ್ಲಿ ಅಥವಾ ಪರೋಕ್ಷದಲ್ಲಿ ವಿಪ್ರಯೋಗವನ್ನು ಅನುಭವಿಸಿ ಸದಾ ಅವನ ಧ್ಯಾನದಲ್ಲಿಯೇ ಇರುತ್ತಾರೆ. ಈ ಎರಡನೆಯ ಅವಸ್ಥೆಯೇ ಮೊದಲನೆಯದಕ್ಕಿಂತ ಬಹು ಉತ್ತಮವಾದುದೆಂದು ಅನೇಕರಿಂದ ಅಂಗೀಕೃತವಾಗಿದೆ.

ಈ ಪಂಥದಲ್ಲಿ ಮರ್ಯಾದಾಮಾರ್ಗಕ್ಕು ಪುಷ್ಟಿಮಾರ್ಗಕ್ಕು ಇರುವ ವ್ಯತ್ಯಾಸ ಸ್ಪಷ್ಟೀಕೃತವಾಗಿದೆ. ಮರ್ಯಾದಾಮಾರ್ಗದಲ್ಲಿ ಯಾವುದೋ ಉದ್ದೇಶಕ್ಕಾಗಿ ವೈದಿಕಾದಿ ನಿಯಮಗಳ ನಿರ್ಬಂಧದಿಂದ ಆತ್ಮನು ಮಾಡಿದ ವ್ರತ ತಪಸ್ಸುಗಳ ಫಲವಾಗಿ ದೈವಸಾನ್ನಿಧ್ಯವುಂಟಾಗುತ್ತದೆ. ಪುಷ್ಟಿಮಾರ್ಗದಲ್ಲಿ ಆತನ ಮೋಕ್ಷಕ್ಕೆ ಈಶ್ವರನ ಅವ್ಯಾಜ ಕೃಪೆಯೇ ಕಾರಣ. ಅಲ್ಲದೆ ಮರ್ಯಾದಾಮಾರ್ಗ ಪುರುಷರಿಗೂ ಅದರಲ್ಲಿಯೂ ಮೊದಲ ಮೂರು ವರ್ಗದವರಿಗೂ ಮಾತ್ರ ಸಾಧ್ಯವಾಗುವುದು. ಆದರೆ ಪುಷ್ಟಿಮಾರ್ಗವು ಜಾತಿ ಲಿಂಗ ಅಧಿಕಾರ ವ್ಯವಸ್ಥೆಯಿಲ್ಲದೆ ಸಾರ್ವತ್ರಿಕವಾಗಿ ಅನ್ವಯಿಸತಕ್ಕದು. ಆದುದರಿಂದ ವಲ್ಲಭಾಚಾರ್ಯರು ಅಖಂಡ ಜೀವಿಗಳ ಮೋಕ್ಷಪ್ರಾಪ್ತಿಗೆ ಅವಕಾಶಮಾಡಿಕೊಟ್ಟಿದ್ದಾರೆ ★

# ಸುಡುವುದು - ಬಿಡುವುದು

"ನಿನ್ನ ಮುಖದಮೇಲೆ ಕಾಣುತ್ತಿರುವ ಈ ಅಲೌಕಿಕ ಸೌಂದರ್ಯ, ಅಪರಿಮಿತ ಶಾಂತಿ – ಏನದ್ಭುತವಾಗಿದೆ? ಇದನ್ನು ಪಡೆಯಲು ನೀನೇನು ಪ್ರಯತ್ನಮಾಡಿದೆ? ಯಾವ ಸೌಂದರ್ಯವರ್ಧಕಸಾಮಗ್ರಿ ಬಳಸಿದೆ? ಯಾವ ಪುಷ್ಟಿದಾಯಕ ಆಹಾರ ತಿಂದೆ? ಅಥವಾ ಯಾವುದಾದರೂ ಮಂತ್ರ ಜಪ ಮಾಡುತ್ತೀಯೇನು? ಇಲ್ಲ ಯೋಗಾಭ್ಯಾಸವೋ ಅಥವ ವ್ಯಾಯಾಮವೋ ಮಾಡುತ್ತೀಯೇನು? ನಿನ್ನ ಸೌಂದರ್ಯದ ಗುಟ್ಟೇನು?"

"ನಾನು ಯಾವ ಔಷಧಿಯನ್ನು ಕುಡಿದಿಲ್ಲ. ಯಾವ ಮಂತ್ರಜಪವನ್ನು ಮಾಡಿಲ್ಲ. ಯಾವ ಯೋಗಾಭ್ಯಾಸವೂ ಮಾಡಿಲ್ಲ – ಸೌಂದರ್ಯ ವರ್ಧಕವಾದ ಯಾವ ವಸ್ತುವನ್ನು ಬಳಸಿಲ್ಲ. ಆದರೇನಂತೆ– ನನ್ನ ಸೌಂದರ್ಯವನ್ನು ಸ್ವಯಂ ಪ್ರಭುಗಳೇ ಮೆಚ್ಚಿ ಕೊಂಡಾಡಿದ್ದಾರೆಂದರೆ ನನಗೆ ಇದಕ್ಕಿಂತ ಬೇರೆ ಭಾಗ್ಯವೇನುಂಟು? ಇಷ್ಟಾಗಿ, ತಮ್ಮಲ್ಲಿ ಒಂದು ವಿಜ್ಞಾಪನೆ".

"ಹೇಳುವುದಾಗಲಿ"

"ಈ ಪ್ರಶ್ನೆ ತಾವೇಕೆ ಕೇಳುತ್ತಿದ್ದೀರಿ?"

"ವಯೋಧರ್ಮದಂತೆ, ಸೌಂದರ್ಯ ವ್ಯತ್ಯಾಸವಾಗುವುದೆಂದು ಕೇಳಿದ್ದೇನೆ. ಇದು ಪ್ರಕೃತಿ ನಿಯಮವೂ ಹೌದು. ಆದರೆ ನೀನಾ ನಿಯಮಕ್ಕೆ ಒಳಪಟ್ಟಿಲ್ಲವೆಂದು ಕಾಣುತ್ತದೆ. ಆದ್ದರಿಂದ ಕೇಳುತ್ತಿದ್ದೇನೆ– ನಿನ್ನ ಸೌಂದರ್ಯದ ಗುಟ್ಟೇನು– ಎಂದು."

"ನೀವು ಯಾವುದನ್ನು ಸೌಂದರ್ಯವೆಂದು ಕೊಂಡಿದ್ದೀರಿ? ಸೌಂದರ್ಯದ ನಿವಾಸಸ್ಥಾನವಾದರೂ ಯಾವುದು–ನಿಮ್ಮ ಕಲ್ಪನೆಯಲ್ಲಿ? ಈ ನನ್ನ ದೇಹದ ಯಾವ ಭಾಗದಲ್ಲಿ ಸೌಂದರ್ಯವಿದೆ ಎಂದು ತಾವು ಭಾವಿಸಿದ್ದೀರಿ? ದಯವಿಟ್ಟು ಉತ್ತರ ಕೊಡಬೇಕು- ಪ್ರಭುಗಳು."

ಈ ಸಂಭಾಷಣೆ ಉಜ್ಜಯನಿಯ ಅರಮನೆಯಲ್ಲಿ ನಡೆಯುತ್ತಿದೆ. ಭಾಗವಹಿಸಿರುವವರು ಆ ದೇಶದ ಮಹಾರಾಜ ಮತ್ತು ಆತನ ಪಟ್ಟದರಸಿ. ಆತನ ಹೆಸರು ಶಿಖಿಧ್ವಜ. ಆಕೆಯ ಹೆಸರು ಚೂಡಾಲೆ ಆಕೆ ಸೌರಾಷ್ಟ್ರ ದೇಶದ ರಾಜಕನ್ಯೆ. ಆಕೆ ಆ ಕಾಲದ ವಿದ್ವನ್ಮಣಿಗಳಲ್ಲಿ ಅಗ್ರಮಾನ್ಯಳು. ಚೂಡಾಲೆ ತಂದೆಯ ಮನೆಯಲ್ಲಿದ್ದಾಗ – ಅನೇಕ ಸಂತಮಹಾತ್ಮರ ದರ್ಶನ ಮಾಡಿದ್ದಳು. ಆಗಾಗ ನಡೆಯುತ್ತಿದ್ದ ಹಿರಿಯರ ಮಾತುಗಳನ್ನು ಕೇಳಿದ್ದಳು. ಸುಸಂಸ್ಕೃತ ವ್ಯಕ್ತಿಗಳ ಸಮುನ್ನತ ವಿಚಾರ ಧಾರೆಯನ್ನು ಮನನ ಮಾಡುತ್ತಿದ್ದಳು. ಶ್ರವಣ-ಮನನ–ನಿಧಿಧ್ಯಾಸನ–ಇದು ಆಕೆಯ ವ್ಯಕ್ತಿತ್ವವನ್ನು ರೂಪಿಸಿದ್ದ ತತ್ತ್ವಗಳು. ಉತ್ತಮ ಗ್ರಂಥಗಳ ಅಧ್ಯಯನ–ಉತ್ತಮ ವ್ಯಕ್ತಿಗಳ ಸಂಪರ್ಕ– ಉತ್ತಮ ವಿಚಾರಗಳ ಚಿನ್ತನ– ಈ ಮೂರೂ ಆಕೆಯ ವ್ಯಕ್ತಿತ್ವಕ್ಕೆ, ಆಂತರಿಕ ವಿಕಾಸಕ್ಕೆ ಮೆರಗು ಕೊಟ್ಟಿದ್ದ ಅಂಶಗಳು.

"ಮಹಾಪ್ರಭುಗಳು ನನ್ನ ಪ್ರಶ್ನೆಗೆ ಉತ್ತರ ನೀಡದೆ ಹೋದರೂ ಚಿಂತೆಯಿಲ್ಲ.

**ವಿದ್ವಾನ್ ಬ. ನ. ಗುಂಡೂರಾವ್**

ತಾವು ಕೇಳಿದ ಪ್ರಶ್ನೆಗೆ ನಾನು ಉತ್ತರ ಕೊಡದೆ ಇರುವುದು ಸೂಕ್ತವಲ್ಲ. ಸೌಂದರ್ಯದಲ್ಲಿ ಎರಡು ಬಗೆಯುಂಟು, ಒಂದು ಬಾಹ್ಯ –ಇನ್ನೊಂದು ಆಂತರಿಕ. ಒಂದು ಕ್ರಮೇಣ ನಶಿಸುತ್ತದೆ; ಇನ್ನೊಂದು ಕ್ರಮೇಣ ವರ್ಧಿಸುತ್ತದೆ. ಹೃದಯದ ಸದ್ಭಾವನೆಗಳು ನಮಗೊಂದು ಗಾಂಭೀರ್ಯವನ್ನು ನೀಡುತ್ತವೆ. ಆ ಸದ್ಭಾವನೆಗಳು ನಮ್ಮ ಸಂಸ್ಕಾರ ಮತ್ತು ಸದಾಚಾರ ಸಂಪನ್ನತೆಯ ಮೇಲೆ ಆಧಾರಪಟ್ಟಿರುತ್ತವೆ. ತಜ್ಜನ್ಯಗಾಂಭೀರ್ಯವನ್ನು ವರ್ಚಸ್ಸು–ಎಂದು ಕರೆಯುತ್ತಾರೆ. ಇದೇ ವಾಸ್ತವವಾಗಿ ಕಾಂತಿ ವರ್ಧಕತತ್ತ್ವ. ಮಾನಸಿಕ ಸಮತೋಲನ ಹೊಂದಿರುವವರು ಸದಾಕಾಲವೂ ಸುಂದರವಾಗೇ ಕಾಣುತ್ತಾರೆ. ರಾಗದ್ವೇಷ ರಹಿತವಾದ ಮನಸ್ಥಿತಿಯೇ ಬಹುಶಃ ನನ್ನ ಸೌಂದರ್ಯದ ಗುಟ್ಟೆಂದರೂ ತಪ್ಪಾಗಲಾರದು".

ಚೂಡಾಲೆ ಗಂಭೀರವಾಗಿ ಹೇಳಿದಳು. ಈ ಮಾತುಗಳು ಶಿಖಿಧ್ವಜನ ಅಧಿಕಾರೋನ್ಮತ್ತವಾದ ತಲೆಗೆ ಏರಲಿಲ್ಲ. ಆತ ನಕ್ಕು ಕೇಳಿದ–

"ಮಹಾರಾಣಿಯವರು ಮಾತಾಡುತ್ತಾರೆಯೇ ಹೊರತು–ಅದರಲ್ಲಿ ಅರ್ಥವಿರುವುದಿಲ್ಲ. ಏಕೆಂದರೆ ಅವರ ಬುದ್ಧಿ ಇನ್ನೂ ಪರಿಪಕ್ವವಾಗಿಲ್ಲ. ಅಥವ ಈ ಸಕಲ ಸಂಪದ್ಭರಿತವಾದ ಸಾಮ್ರಾಜ್ಯ ವೈಭವವನ್ನನುಭವಿಸಿ ಆನಂದಿಸುವ ರೀತಿ ನೀತಿಗಳು ತಿಳಿದಿಲ್ಲವೋ!"

ಗಂಡನ ಅಭಿಪ್ರಾಯ ತುಂಬ ಎಳಸು– ಎಂದು ಹೆಂಡತಿಗೆ ಸ್ಪಷ್ಟವಾಗಿ ಭಾಸವಾಯ್ತು. ಅಭಿಪ್ರಾಯ ಪಕ್ವವಾಗುವುದು ಅನುಭವದಮೇಲೆ. ಅನುಭವ ಬರುವವರೆಗೂ ನಾನಾಡಿದ ಮಾತು ಈತನಿಗೆ ಅರ್ಥವಾಗುವುದಿಲ್ಲ. ಅನಧಿಕಾರಿಗೆ ಉಪದೇಶ ನೀಡುವುದು ವ್ಯರ್ಥ, ಅಥವ ಅನರ್ಥಕಾರಿಯಾದರೂ ಆದೀತು. ಆತನ ಮನಸ್ಸು ಕಾಲಕ್ರಮೇಣ ಹದಕ್ಕೆ ಬರುತ್ತದೆ. ಆಗ ಎಲ್ಲವೂ ಸರಿಹೋಗುತ್ತದೆ – ಎಂದುಕೊಂಡಳು ಚೂಡಾಲೆ.

ಹತ್ತಾರು ವರ್ಷಗಳುರುಳಿಹೋದವು. ಹೋಗುವಾಗ ತಮ್ಮ ಪ್ರಭಾವವನ್ನು ಶಿಖಿಧ್ವಜನಮೇಲೆ ಬೀರಿ ಹೋದವು.

"ಜಗತ್ತು–ಜೀವನ, ಹೂವಿನ ಸರವಿದ್ದಂತೆ, ಪ್ರಾರಂಭದಲ್ಲಿ ನಳನಳಿಸುತ್ತಿರುತ್ತದೆ. ಘಮಘಮಿಸುತ್ತಿರುತ್ತದೆ. ನಂತರ ಕಸವಾಗುತ್ತದೆ, ಬೇಸರದ ವಸ್ತುವಾಗುತ್ತದೆ. ಈ ಮಾತು ರಾಜ್ಯ–ಅಧಿಕಾರ...ಎಲ್ಲಕ್ಕೂ ಅನ್ವಯಿಸುತ್ತದೆ. ನಾನು ರಾಜ್ಯಭಾರದ ಹೊಣೆ ನಿನಗೊಪ್ಪಿಸಿ, ತಪಸ್ಸಿಗಾಗಿ, ಮನಶ್ಶಾಂತಿ ಪಡೆಯುವ ಸಲುವಾಗಿ ತಪೋವನಕ್ಕೆ ಹೊರಡುವುದೆಂದು ನಿರ್ಣಯಮಾಡಿದ್ದೇನೆ. ನಾನಿಳಿಸ ಬಯಸುವ ಭಾರವನ್ನು ನೀನು ತೆಗೆದುಕೊಳ್ಳಬೇಕು."

ಮಹಾರಾಜ ಅನುನಯಪ ಧ್ವನಿಯಲ್ಲಿ ಹೇಳಿದ.

"ಮಹಾರಾಜರು–ನನ್ನ ಮನವಿಯನ್ನು ಸ್ವಲ್ಪ ಲಾಲಿಸಬೇಕು. ನಿರ್ಣಯಮಾಡುವಾಗ–ಅದು ಯಾವುದೇ ವಿಚಾರದಲ್ಲಾಗಲಿ–ಔಚಿತ್ಯವಿರಬೇಕು. ಅದಿಲ್ಲದೆ ಯಾವ ತೀರ್ಮಾನವೂ ಶೋಭಾಯಮಾನವಾಗುವುದಿಲ್ಲ. ತಪಸ್ಸು ಮನಶ್ಶಾಂತಿಯನ್ನು ನೀಡುತ್ತದೆ–ನಿಜ. ಆದರೆ ಈ ರೀತಿ ವಾನಪ್ರಸ್ಥ ಆಶ್ರಮಕ್ಕೆ ಹೋಗುವುದು ಯಾವಾಗ? ಅದಕ್ಕೊಂದು ಕಾಲವಿದೆ. ಅದು ಬಂದಾಗ ನಾವಿಬ್ಬರೂ ಹೋಗೋಣ–ಶಾಂತಿಲಾಭ ಪಡೆಯೋಣ."

ಚೂಡಾಲೆ ನಗುತ್ತ ಹೇಳಿದಳು.

"ನನಗೆ ಬೇಸರ ಬಂದಿದೆ–ನಾನು ಹೋಗುವುದೆಂದು ತೀರ್ಮಾನಮಾಡಿಕೊಂಡಿದ್ದೇನೆ–ಈ ಮಾತು ಬದಲಾವಣೆಯಾಗುವಂತಿಲ್ಲ".

"ಹೋಗುವುದು ಸರಿ ಆದರೆ ಬೇಸರದಿಂದ ಹೋಗಬಾರದು, ವೈರಾಗ್ಯದಿಂದ ಹೋಗಬೇಕು."

"ವೈರಾಗ್ಯವೂ ಒಂದು ರೀತಿಯ ಬೇಸರವೇ ತಾನೆ?"

"ಕೋಪಯುಕ್ತವಾದದ್ದು ಬೇಸರ. ಜ್ಞಾನಯುಕ್ತವಾದದ್ದು ವೈರಾಗ್ಯ". ಹೆಂಗಸರೊಡನೆ ಚರ್ಚೆ ಮಾಡುವುದು ಪ್ರಯೋಜನವಿಲ್ಲದ ಕೆಲಸವೆಂದು ಭಾವಿಸಿದ ಮಹಾರಾಜ ಸುಮ್ಮನಾದ–ಮರುಮಾತಾಡಲಿಲ್ಲ ಚೂಡಾಲೆಯನ್ನು ಮಾತಿನಲ್ಲಿ ಸೋಲಿಸುವುದು ಸಾಧ್ಯವಿಲ್ಲವೆಂದು ಮಹಾರಾಜನಿಗೂ ಮನದಟ್ಟಾಗಿತ್ತು. ಆದ್ದರಿಂದ ಆತ ಪತ್ನಿಯ ಕಣ್ಣು ತಪ್ಪಿಸಿ, ತಪೋವನಕ್ಕೆ ಹೊರಟೇ ಹೋದ. ಆದರೇನಂತೆ– ಚೂಡಾಲೆ ತನ್ನ ಯೋಗಶಕ್ತಿಯಿಂದ ಮಹಾರಾಜನ ಪ್ರತಿಯೊಂದು ಚಲನವಲನವನ್ನೂ ಕಾಣುತ್ತಲೇ ಇದ್ದಳು. ರಾಜ್ಯಭಾರದ ವ್ಯವಹಾರವನ್ನೂ ನಿಭಾಯಿಸುತ್ತಲೇ ಇದ್ದಳು. ದೂರದರ್ಶಕ ಯಂತ್ರದಲ್ಲಿ ಕಂಡು ಬರುವಂತೆ, ಮಹಾರಾಣಿಗೆ ತಾಸಿದ್ದಕಡೆಯೇ, ಗಂಡನಿದ್ದ ತಪೋವನ ಕಾಣಿಸುತ್ತಿತ್ತು. ಆತ, ಕಠಿನ ವ್ರತನಿಯಮದಿಂದಾಗಿ, ತುಂಬ ಕೃಶನಾಗಿದ್ದ, ಇದು ಉಪದೇಶಕ್ಕೆ ಸೂಕ್ತ ಸಮಯವೆಂದು ಆಕೆಗೆ ತೋಚಿದರೂ– ಒಂದು ಸಂದೇಹ ಆಗಾಗ ಬಾಧಿಸುತ್ತಿತ್ತು. ಶ್ರದ್ಧೆಯಿಲ್ಲದೆ ಉಪದೇಶದಲ್ಲಿ ನಂಬಿಕೆ ಬರುವುದಿಲ್ಲ. ಶ್ರದ್ಧೆ ಬರಬೇಕಾದರೆ ವ್ಯಕ್ತಿಯ ಮುಂದೆ ಏನಾದರೂ ಪವಾಡ ನಡೆಯಬೇಕು. ಚೂಡಾಲೆ, ಋಷಿ ಕುಮಾರನಂತೆ ವೇಷ ಧರಿಸಿ. ಗಂಡನಿದ್ದ ತಪೋವನಕ್ಕೆ ಬಂದಳು. ಆಗಂತುಕ ತೇಜಸ್ವಿಯನ್ನು ಕಂಡು, ಶಿಖಿಧ್ವಜ ಭಕ್ತಿಯಿಂದ ನಮಸ್ಕರಿಸಿದ. ಆತ ಪ್ರತಿವಂದನೆ ಸಲ್ಲಿಸಿ ನೀವು ಯಾರು?–ಎಂದು

ಪ್ರಶ್ನಿಸಿದ. ಶಿಖಿಧ್ವಜ ತನ್ನ ಪರಿಚಯವೆಲ್ಲ ಹೇಳುತ್ತ–'ನಾನು ಸಂಸಾರವ್ಯವಹಾರದಿಂದ ಭಯಭೀತನಾಗಿ ಈ ಕಾಡಿಗೆ ಬಂದಿದ್ದೇನೆ. ಸಾಕಷ್ಟು ತಪಸ್ಸಾಚರಿಸಿದ್ದೇನೆ. ಆದರೇ ನಂತೆ, ಮನಸ್ಸಿನ ಕಳವಳ ತಪ್ಪಲಿಲ್ಲ – ಶಾಂತಿಲಾಭವಾಗಲಿಲ್ಲ. ತಾವು ಇದಕ್ಕೇನಾದರೂ ಪರಿಹಾರ ಸೂಚಿಸೋಣವಾದರೆ, ತುಂಬ ಕೃತಜ್ಞನಾದೇನು, ಎಂದ. ಅಭ್ಯಾಗತ ತೇಜಸ್ವಿ ಮಂದಹಾಸ ಮಿಶ್ರಿತ ಧ್ವನಿಯಲ್ಲಿ ಹೇಳಿದ —

"ಕತ್ತಲು ಸಂಪೂರ್ಣ ಕಳೆದ ಮೇಲೆ ತಾನೆ ಬೆಳಕು ಮೂಡುವುದು? ಅದುವರೆಗೂ ತಾಳ್ಮೆಯಿರಬೇಕು. ನಮ್ಮ ಆತುರಕ್ಕೆ ಬೆಳಗಾಗುತ್ತದೇನು? ಭೇದ ದೃಷ್ಟಿ ಅಳಿಯುವತನಕ, ಪೂರ್ಣದೃಷ್ಟಿ ಬರಲು ಸಾಧ್ಯವಿಲ್ಲ. ಅದಿರಲಿ, ಈಗ ನಾನೊಂದು ಮಾತು ಹೇಳಿದರೆ ತಾವು ಅಸಮಾಧಾನ ಪಡಬಾರದು."

"ಅಸಮಾಧಾನವೇ? ಖಂಡಿತ ಇಲ್ಲ ಮಹಾತ್ಮರೆ. ತಾವು ಯಾರೋ–ನನ್ನ ಪಾಲಿಗೆ ಉದ್ಧಾರಕರ್ತರಾಗಿ ದಯಮಾಡಿಸಿದ್ದೀರಿ. ತಾವು ಏನು ಬೇಕಾದರೂ ಹೇಳಿ – ನನಗೆ ಮಾರ್ಗದರ್ಶನ ನೀಡಿ. ಅಷ್ಟೆ."

"ಸಂತೋಷ. ಬಹುಕಾಲದ ಹಿಂದೆ ನಿಮ್ಮ ಪತ್ನಿ ಕೆಲವು ವಿಚಾರಗಳನ್ನು ತಿಳಿಸಿದ್ದಳಲ್ಲವೇ? ನೀವಾಕೆಯ ಮಾತನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ – ಅದನ್ನು ನೀವು ಅರ್ಥಮಾಡಿಕೊಂಡಿದ್ದಿದ್ದರೆ ತ್ಯಾಗದ ಮಹತ್ವ ಅರಿವಾಗುತ್ತಿತ್ತು. 'ತ್ಯಾಗಾಚ್ಛಾಂತಿರನಂತರಂ' – ಅಲ್ಲವೆ? ತ್ಯಾಗ ಮಾಡಿದ ನಂತರವಲ್ಲವೇ ಶಾಂತಿ ದೊರೆಯುವುದು?

"ತಮ್ಮ ಮಾತು ದಿಟ. ಮಹಾತ್ಮರಾದ ತಮಗೆ ತಿಳಿಯದ ವಿಚಾರವೇನುಂಟು? ತಾವು ತ್ಯಾಗವೆಂಬ ಮಾತು ಹೇಳಿದಿರಿ. ಅದರ ಅರ್ಥವ್ಯಾಪ್ತಿ ಬಹು ದೊಡ್ಡದಲ್ಲವೇ?"

"ಹೌದು. ಅದರ ಅರ್ಥವ್ಯಾಪ್ತಿ ನಿಜವಾಗಿಯೂ ದೊಡ್ಡದು ಜೀವಿಗೆ ಅಮರತ್ವ ದೊರೆಯುವುದೇ ತ್ಯಾಗದಿಂದ. ತ್ಯಾಗವೆಂದರೆ ಎಲ್ಲವನ್ನೂ ಬಿಡುವುದು. "ಎಲ್ಲವೂ"– ಎಂದಾಗ ಅದರ ವ್ಯಾಪ್ತಿಯೂ ದೊಡ್ಡದೇ ತಾನೆ? ಬಹುಶಃ ಎಲ್ಲವನ್ನೂ ಬಿಟ್ಟೆನೆಂಬ ಅಭಿಮಾನವನ್ನೂ ಬಿಟ್ಟಾಗ, ತ್ಯಾಗದ ಪೂರ್ಣಸ್ಥಿತಿಯುಂಟಾಗುತ್ತದೆ."

ತರುಣ ತಪಸ್ವಿ ಹೇಳಿದ.

ಶಿಖಿಧ್ವಜ ತನ್ನಲ್ಲಿದ್ದ ಕೃಷ್ಣಾಜಿನ–ಕಮಂಡಲ–ದಂಡ–ಜಪಮಾಲೆ–ಎಲ್ಲವನ್ನೂ ಕಿತ್ತೆಸೆದ. ತಾಸಿದ್ದ ಗುಡಿಸಲಿಗೂ ಬೆಂಕಿ ಹಚ್ಚಿಬಿಟ್ಟ. ಎಲ್ಲವನ್ನೂ ತ್ಯಾಗಮಾಡಿದೆನೆಂದು ಕೊಂಡ. ಅವನಲ್ಲಿ ಯಾವ ವಸ್ತುವೂ ಉಳಿದಿರಲಿಲ್ಲ.

"ಶಿಖಿಧ್ವಜ – ನೀನೆಲ್ಲವನ್ನೂ ಸುಟ್ಟು ಹಾಕಿದ್ದಾಯ್ತು. ಸುಟ್ಟುಹಾಕುವುದು ಬೇರೆ–ಬಿಟ್ಟು ಬಿಡುವುದು ಬೇರೆ. ಬಿಡುವುದನ್ನು ತ್ಯಾಗವೆನ್ನುವರೇ ಹೊರತು ಸುಡುವುದನ್ನು ತ್ಯಾಗವೆನ್ನುತ್ತಾರೆಯೆ? ನೀನು ಈಗ ಸುಟ್ಟ ವಸ್ತುಗಳಲ್ಲಿ – ನಿನ್ನದೇ – ಸ್ವಂತದ್ದೇ – ಆದ ವಸ್ತುಗಳೇನಾದರೂ ಇತ್ತೇನು? ಅವೆಲ್ಲವೂ ಪ್ರಕೃತಿನಿರ್ಮಿತ ವಸ್ತುಗಳಲ್ಲವೇ?"

ತರುಣ ತಪಸ್ವಿ ಕೇಳಿದ.

"ಹಾಗಾದರೆ ಈ ನನ್ನ ಶರೀರವನ್ನೂ ಅಗ್ನಿಗಾಹುತಿ ಮಾಡಿ ಬಿಡುತ್ತೇನೆ."

"ಮಾಡಬಹುದು. ಆದರೆ ಹಾಗೆ ಮಾಡುವ ಮುನ್ನ ಸ್ವಲ್ಪ ಯೋಚನೆಮಾಡು. ಈ ಶರೀರ ನಿನ್ನದೇನು? ಪಾಂಚಭೌತಿಕವಾದ ಈ ಶರೀರವೂ ಸಹ, ಪ್ರಕೃತಿ ನಿರ್ಮಿತ ವಸ್ತುವೇ! ಇದನ್ನು ಅಗ್ನಿಗಾಹುತಿ ಮಾಡುವುದರಲ್ಲಿ ಪ್ರಯೋಜನವಾದರೂ ಏನು? ದಂಡ, ಕಮಂಡಲದಂತೆ, ಶರೀರವೂ ಒಂದು ಉಪಕರಣ. ಉಪಕರಣವನ್ನು ಸುಡುವುದರಲ್ಲಿ ಬುದ್ಧಿವಂತಿಕೆ ಇಲ್ಲ. ಬುದ್ಧಿವಂತಿಕೆ ಇರುವುದು ಅದನ್ನುಪಯೋಗಿಸಿಕೊಳ್ಳುವುದರಲ್ಲಿ.

ತರುಣತಪಸ್ವಿ ಹೇಳಿದ. ಶಿಖಿಧ್ವಜ ಬೆಪ್ಪಾಗಿ ಕೇಳಿದ–

"ಹಾಗಾದರೆ ನನ್ನದೆಂಬುವುದು ಯಾವುದು?"

"ಅದು ನೀನೇ ಯೋಚನೆಮಾಡಬೇಕಾದ ವಿಚಾರ".

"ತಾವೇ ತಿಳಿಸಿದರೆ ತಪ್ಪೇನು?"

"ತಪ್ಪೇನೂ ಇಲ್ಲ. ನೀನು ನನ್ನ ಮಾತನ್ನು ಒಪ್ಪಬೇಕು–ಅಷ್ಟೆ. ಇವೆಲ್ಲ ವಸ್ತುಗಳೂ ನನ್ನದು–ಎಂದು ನೀನು ತಿಳಿದಿದ್ದೆಯಲ್ಲವೇ? ಶಿಖಿಧ್ವಜ? ಇದನ್ನು ಅಹಂಕಾರವೆನ್ನುತ್ತಾರೆ –ನನ್ನದೆಂಬುದನ್ನು ಮಮಕಾರವೆನ್ನುತ್ತಾರೆ. ಇವೆರಡನ್ನೂ ಬಿಟ್ಟಾಗ, ನನ್ನದೆಂಬುದೇನೂ ಇಲ್ಲವೆಂದು ತಿಳಿದಾಗ ನಿನಗೆ ಶಾಂತಿ ದೊರೆತೀತು. ಅಹಂಕಾರ ತ್ಯಾಗಮಾಡಿದ ನಂತರ ಉಳಿಯುವುದೇನು ಎಂದು ನಿನಗೆ ಸಂದೇಹವಿರಬಹುದಲ್ಲವೆ ಮಹಾರಾಜ. ಅಹಂಕಾರವೊಂದು ಅಲೆ; ಮಮಕಾರವೊಂದು ಅಲೆ; ಸಾಗರದ ಅಲೆಗಳು ತಮ್ಮತನವನ್ನು ಕಳೆದುಕೊಂಡ ಮೇಲೇನಾಗುತ್ತವೆ? – ಸಾಗರವೇ ಆಗುತ್ತವೆ. ಅವು ಕರಗಿಹೋಗುವುದು–ವಿಲೀನವಾಗುವುದು – ಸಾಗರದಲ್ಲೇ ತಾನೆ? ಅಲೆ ಪ್ರತ್ಯೇಕವಾಗಿದ್ದಾಗ ಅದಕ್ಕೆ ಬೆಲೆಯಿಲ್ಲ. ಅದರಿಂದ ಉಪಯೋಗವೂ ಇಲ್ಲ. ಆಗ ಅದನ್ನು ರತ್ನೋದಧಿ–ಎಂದು ಯಾರೂ ಕರೆಯುವುದಿಲ್ಲ. ಸಾಗರದ ಗಾಂಭೀರ್ಯವೆಲ್ಲಿ–ಅಲೆಯ ಚಾಂಚಲ್ಯವೆಲ್ಲಿ?

ತರುಣ ತಪಸ್ವಿ ಹೇಳಿದ.

"ಅಹಂಕಾರತ್ಯಾಗ"–ಈ ಮಾತು ಶಿಖಿಧ್ವಜನ ಮನಸ್ಸಿನಲ್ಲಿ ನಾಟಿತು. ಅವನ ಅಂತರಂಗದಲ್ಲಿ ಹೊಸದೊಂದು ಲೋಕವನ್ನೇ ತಯಾರುಮಾಡಿತು. ಅಹಂಕಾರ ಅಳಿದಮೇಲೆ ಏನುಳಿಯುತ್ತದೆ - ಅದರ ಭವ್ಯತೆ – ಅಗಾಧತೆ– ಗಾಂಭೀರ್ಯ – ಪ್ರಖರ ಪ್ರಕಾಶ, ಪರಿಪೂರ್ಣ ಸೌಂದರ್ಯ – ಅನಂತ ವಿಸ್ತಾರ ... ಒಂದೊಂದೂ ಗೋಚರವಾಗತೊಡಗಿತು. ಕೊನೆಗೆ ಅವೆಲ್ಲದರ ಸಮಷ್ಟಿ ಸ್ವರೂಪವಾಗಿ ಕಂಡುಬಂದ ಆ ಮಹಾವಸ್ತುವಿಗೆ ಕೈಮುಗಿದ – ದೇಶ ಹಾಗೂ ಕಾಲಾತೀತವಾದ, ಸರ್ವಾತೀತವೂ, ಸರ್ವಾತಿರಿಕ್ತವೂ, ಸರ್ವೋತ್ಕೃಷ್ಟವೂ ಅದ ಆ ವಸ್ತುವಿಗೆ ಶರಣಾದ – ಮರುಕ್ಷಣದಲ್ಲೇ ಆ ವಸ್ತು ತಾನೇ ಎಂದರಿತುಕೊಂಡ. ಈ ಅರಿವು ಮೂಡಿದಾಗ ಅವನಿಗೆ ಶಾಂತಿ ದೊರೆಯಿತು.

ಇದನ್ನೇ ಇರಬೇಕು ಉಪನಿಷತ್ತು ಹೀಗೆ ಹೇಳಿದೆ–

"ಭಿದ್ಯತೇ ಹೃದಯಗ್ರಂಥಿಃ
ಛಿದ್ಯನ್ತೇ ಸರ್ವಸಂಶಯಾಃ ।
ಕ್ಷೀಯನ್ತೇ ಽಸ್ಯ ಕರ್ಮಾಣಿ
ತಸ್ಮಿನ್ ದೃಷ್ಟೇ ಪರಾವರೇ ॥

---

(6ನೇ ಪುಟದಿಂದ)

ಇದಾದ ಎರಡು ವರುಷಗಳಕಾಲ ರಾಮಾನುಜರು ತಿರುವಿಲ್ಲರೈಗೆ ಹೊರಟು ಹೋದರೆಂದೂ ದಾಖಲೆಗಳು ನಿರೂಪಿಸುತ್ತವೆ. ನಂತರ ತಮ್ಮ ತಪ್ಪನ್ನು ಅರಿತುಕೊಂಡ ದೇವಸ್ಥಾನದ ಪರಿವಾರದವರು ಯಾಮುನಾಚಾರ್ಯರ ಮುಖ್ಯ ಶಿಷ್ಯರಾದ ಅರ್‌ಯರ್‌ರವರನ್ನು ಕಳುಹಿಸಿ ರಾಮಾನುಜಾಚಾರ್ಯರನ್ನು ಬರಮಾಡಿಕೊಂಡರು.

ರಾಮಾನುಜಾಚಾರ್ಯರು ಬಂದ ಮೇಲೂ ದೇವಸ್ಥಾನದ ಸರ್ವಾಧಿಕಾರವನ್ನು ಕೊಡಲು ಘರ್ಷಣೆ ಇತ್ತೆಂದು 'ಕೋಯಿಲ್ ಒಳುಗು' ವಿನಿಂದ ತಿಳಿಯುತ್ತದೆ. ದೇವಸ್ಥಾನದ ಬೀಗದ ಕೈಗಳು ವಂಶಪಾಂಪರ್ಯವಾಗಿ ಬಂದ ದೇವಸ್ಥಾನದ ಪ್ರಧಾನ ಅರ್ಚಕರುಗಳ ಹತ್ತಿರವೇ ಇತ್ತು.

ಪೆರಿಯಕೋಯಿಲ್‌ನಂಬಿಯರಿಗೆ ವೇದಶಾಸ್ತ್ರದಲ್ಲಿ ಮಹತ್ತರವಾದ ಪಾಂಡಿತ್ಯವಿತ್ತು. ಆದರೆ ಅವರಿಗೆ ದ್ರಾವಿಡವೇದದಲ್ಲಿ ಪಾಂಡಿತ್ಯವಿರಲಿಲ್ಲ. ಆದ್ದರಿಂದ ಪೆರಿಯಕೋಯಿಲ್ ನಂಬಿಯವರ ಮಾತೋಶ್ರೀಯವರಿಗೆ ಕೂರತ್ತಾಳ್ವಾರರು ದಿವ್ಯಸ್ತೋತ್ರಗಳನ್ನು ಹಾಡಿ ಅವುಗಳಿಗೆ ವಿಮರ್ಶೆಗಳನ್ನು ಹೇಳುತ್ತಿದ್ದರು, ಮತ್ತು ಅವರ ಅನುಗ್ರಹ ಸಂಪಾದಿಸಿ ಕೊಂಡರೆಂದು ಹೇಳುತ್ತಾರೆ.

ಪೆರಿಯಕೋಯಿಲ್‌ನಂಬಿಯವರ ಮಾತೋಶ್ರೀಯವರು ತೀರಿಕೊಂಡರು. ಆಗ ಪೆರಿಯಕೋಯಿಲ್ ನಂಬಿಯವರು ಕೂರತ್ತಾಳ್ವಾರರನ್ನು ಏಕಾಹಕ್ಕೆ ಕರೆದು, ದೇವಾಲಯದ ಬೀಗದ ಕೈಗಳನ್ನು ಕೂರತ್ತಾಳ್ವಾರಿಗೆ ಒಪ್ಪಿಸಿದ್ದೂ ಅಲ್ಲದೆ, ತಮ್ಮ ಮನೆಯನ್ನೂ ಕೂರತ್ತಾಳ್ವಾರರಿಗೆ ಕೊಟ್ಟರು. ಅವರು ನಂತರ ಸ್ವಂತ ಊರಿಗೆ ಹೋಗಿ ಉಳಿದ ತಮ್ಮ ಮಾತೋಶ್ರೀಯವರ ಅಪರಕರ್ಮಗಳನ್ನು ಮುಗಿಸಿದರೆಂದು ದೇವಸ್ಥಾನದ ದಾಖಲೆಗಳು ತಿಳಿಸುತ್ತವೆ.

ರಾಮಾನುಜಾಚಾರ್ಯರು ಮತ್ತು ಕೂರತ್ತಾಳ್ವಾರರು ಮಾರನೆ ದಿನ ದೇವಸ್ಥಾನಕ್ಕೆ ಹೋದಾಗ ಅಲ್ಲಿಯ ಅರ್ಚಕರುಗಳು ಇವರನ್ನು ತಡೆದರು. ಪೆರಿಯಕೋಯಿಲ್ ನಂಬಿಯವರೇ ಬಂದು ತಮ್ಮ ಹಕ್ಕನ್ನೆಲ್ಲಾ ಶ್ರೀ ರಾಮಾನುಜಾಚಾರ್ಯರಿಗೆ ವಹಿಸಿಕೊಟ್ಟಿರುವುದಾಗಿ ತಿಳಿಸಿದ ಮೇಲೆ ರಾಮಾನುಜಾಚಾರ್ಯರನ್ನು ಅವರು ಒಳಗೆ ಹೋಗಲು ಬಿಟ್ಟರು.

ಸ್ವಂತ ಊರಿಗೆ ಬಂದ ಪೆರಿಯಕೋಯಿಲ್ ನಂಬಿಯವರು ದ್ರಾವಿಡವೇದಗಳನ್ನು ಅಭ್ಯಾಸಮಾಡಿ ಅವುಗಳಲ್ಲಿ ಒಂದು ಸಾವಿರ ಪಾಶುರಗಳನ್ನು ರಾಗವಾಗಿ, ತಾಳಬದ್ಧವಾಗಿ ಹಾಡುತ್ತಿದ್ದರು. ಇವರ ಹಾಡಿಕೆಯ ಚತುರತೆ, ಅದರಲ್ಲಿದ್ದ ಅವರ ಭಕ್ತಿ, ಶ್ರದ್ಧೆಗಳನ್ನು ಕಂಡು ರಾಮಾನುಜಾಚಾರ್ಯರಿಗೆ ಬಹಳ ಸಂತೋಷವಾಯಿತು. ಅವರು ಪೆರಿಯಕೋಯಿಲ್ ನಂಬಿಯವರಿಗೆ 'ಅಮುದನಾರ್' ಎಂದು ಒಂದು ಹೊಸ ಹೆಸರನ್ನು ಕೊಟ್ಟರು (ತಮಿಳುರೂಪದ ಸಂಸ್ಕೃತ ಪದ ಅಮೃತ, ಜೇನು ಅಥವಾ ಮಧು).

ಇದರಿಂದ ಅವರಿಗೆ ರಾಮಾನುಜಾಚಾರ್ಯರಲ್ಲಿ ಹೆಚ್ಚಿನ ಗೌರವ, ಭಕ್ತಿಯುಂಟಾಯಿತು ಮತ್ತು ಅವರಿಗೆ ದಿವ್ಯಜ್ಞಾನವುಂಟಾಯಿತು ತಮ್ಮ ದಿವ್ಯಜ್ಞಾನದಿಂದ ರಾಮಾನುಜರನ್ನು ಕುರಿತು 108 ಪಾಶುರಗಳನ್ನು ಬರೆದರು. ಆದರೆ ರಾಮಾನುಜಾಚಾರ್ಯರು ಇದನ್ನು ಒಪ್ಪಲಿಲ್ಲ. ಏಕೆಂದರೆ ಅದು ಆಳ್ವಾರುಗಳ ಬಗ್ಗೆ ಯಾವ ವಿಷಯವನ್ನೂ ಕೊಡುವುದಿಲ್ಲ. ನಂತರ ಅವರ ಆಜ್ಞೆಯಂತೆ ರೂಪಾಂತರಗೊಳಿಸಿದರು ಅಮುದನಾರ್.

ತಿರುವರಂಗತ್ತಮುದನಾರವರು ನಂತರ ರಾಮಾನುಜರ ಶಿಷ್ಯರಲ್ಲಿ ಪ್ರಮುಖರಾಗಿ, 'ರಾಮಾನುಜ ನೂತ್ತಂದಾದಿ' ಎಂಬ ಇದೊಂದೇ ಕೃತಿಯನ್ನು ರಚಿಸಿದರು. ಇದೊಂದು ಅಪರೂಪದ ಪ್ರಾರ್ಥನಾ ಸರಮಾಲೆ.

ಇನಿಯ್ಯ ಕುರೈ ನಮಕ್ಕೆಮ್ಬೆರು
  ಮಾನಾರ್ ತಿರುನಾಮತ್ತಾಲ್
ಮುನಿತನ್ದ ನೂತ್ತೆಟ್ಟು ಶ್ಯಾವಿತ್ತಿರಿ
  ಯೆನ್ನುಮ್ ನುಣ್‌ಪೊರುಳೈ
ಕ್ಕಲಿತನ್ದ ಶೆಮ್ ಶೊಲ್ ಕಲಿತ್ತುರೈ
  ಯನ್ದಾದಿ ಪಾಡಿತ್ತನ್ದ
ಪುನಿದ್ದ ತಿರುವರಂಗ ತ್ತಮುದಾಗಿಯ
  ಪುಣ್ಣಿಯನೇ

ಪುಣ್ಯಪುರುಷರಾದ ಅಮುದನಾರ್‌ರವರು ರಾಮಾನುಜರ ಹೆಸರು ಪ್ರತಿಯೊಂದು ಪಾಶುರದಲ್ಲೂ ಬರುವಂತೆ, ಕಲಿತ್ತುರೈ ಎಂಬ ವೃತ್ತದಲ್ಲಿ ಅಂತಾದಿಯಾಗುವಂತಹ 108 ಪಾಶುರಗಳನ್ನು ರಚಿಸಿ ಸಾವಿತ್ರಿ ಎಂಬ ಪ್ರಣವಾರ್ಥದ ಶಕ್ತಿಯನ್ನು ಹೊಂದಿದ ರಾಮಾನುಜನೂತ್ತಂದಾದಿಯನ್ನು ರಚಿಸಿದರು.

ಪ್ರತಿಯೊಂದು ಪಾಶುರದಲ್ಲೂ ರಾಮಾನುಜಾ ಎಂದು ಬಂದಿರುವುದರಿಂದ ಇದರ ಪಾವಿತ್ರ್ಯ ಹೆಚ್ಚು. ದೇವಸ್ಥಾನಗಳ ನಾಲಾಯಿರ ದಿವ್ಯಪ್ರಬಂಧ (ದ್ರಾವಿಡ ವೇದ) ಪಠನದ ಸಮಯದಲ್ಲಿ ಈ ಕೃತಿಯ ಪಠನ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿದೆ. ಅಲ್ಲದೆ ನಿಷ್ಠಾವಂತ ಶ್ರೀ ವೈಷ್ಣವರು ಈ ಕೃತಿಯನ್ನು ಪ್ರತಿದಿನವೂ ಪಾರಾಯಣ ಮಾಡುತ್ತಾರೆ.

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

## ಗಣೇಶೋತ್ಸವದಲ್ಲಿ ಸಾಮೂಹಿಕ ವಿವಾಹ

ಕೋಲಾರದಲ್ಲಿ ಒಂದು ವಾರ ಕಾಲ ನಡೆದ ಸಾರ್ವಜನಿಕ ಗಣೇಶೋತ್ಸವದಲ್ಲಿ ಸಾಮೂಹಿಕ ವಿವಾಹಗಳನ್ನೂ ನೆರವೇರಿಸಲಾಯಿತು. ಈ ಹಿಂದೆ ನಗರದ ವಿವಿಧ ಕೇರಿಗಳಲ್ಲಿ ಬಿಡಿಬಿಡಿಯಾಗಿ ನಡೆಯುತ್ತಿದ್ದ ಗಣೇಶೋತ್ಸವಗಳನ್ನು ಕೂಡಿಸಿ ಈ ಬಾರಿ ವೈವಿಧ್ಯತೆಯಲ್ಲಿನ ಏಕತೆಯನ್ನು ಎತ್ತಿ ಹಿಡಿಯಲೆಂಬಂತೆ, ನಗರಕ್ಕೆಲ್ಲ ಒಂದೇ ಗಣೇಶೋತ್ಸವ ಸಮಿತಿಯನ್ನು ಸ್ಥಳೀಯ ವಿಧಾನಸಭಾ ಸದಸ್ಯ ಶ್ರೀ ಕೆ. ಆರ್. ಶ್ರೀನಿವಾಸಯ್ಯನವರ ಹಿರಿತನದಲ್ಲಿ ಉಂಟುಮಾಡಿ ನಗರ ಸಭಾಧ್ಯಕ್ಷರು ಉಪಾಧ್ಯಕ್ಷರು, ಸದಸ್ಯರು, ಗಣ್ಯರುಗಳ ಗುಣಾತ್ಮಕ ಭಾಗವಹಿಸುವಿಕೆಯಿಂದ ಒಂದು ವಾರ ಕಾಲದ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಯಶಸ್ವಿಯಾಗಿ, ಹಳೆ ಮಾಧ್ಯಮಿಕ ಶಾಲಾ ಮೈದಾನದಲ್ಲಿ ಸುಮಾರು ಹನ್ನೆರಡು ಅಡಿ ಎತ್ತರದ ಭವ್ಯ ವಿನಾಯಕ ಮೂರ್ತಿಯನ್ನು ಪ್ರತಿಷ್ಠಾಪಿಸಿ, ಪೂಜಿಸಿ, ವೈಭವ ಪೂರ್ಣವಾಗಿ ವಿಸರ್ಜಿಸುವುದರ ಮೂಲಕ ಆಚರಿಸಲಾಯಿತು.

ತತ್ಸಂಬಂಧವಾಗಿ ಸೆಪ್ಟಂಬರ್ 1 ರಂದು ಸಾಮೂಹಿಕ ವಿವಾಹಗಳನ್ನೂ ಸಾಮೂಹಿಕ ಭೋಜನವನ್ನೂ ಏರ್ಪಡಿಸಲಾಗಿತ್ತು. ಈ ಸಾಮೂಹಿಕ ವಿವಾಹಗಳಲ್ಲಿ ಕೋಲಾರ ತಾಲ್ಲೂಕಿನವರೇ ಅಲ್ಲದೆ ಜಿಲ್ಲೆಯ ವಿವಿಧೆಡೆಗಳಿಂದ ಬಂದಿದ್ದ ವಧೂವರರೂ ವಿವಾಹಬಂಧನಕ್ಕೆ ಒಳಗಾದರು. ಒಟ್ಟು ಹನ್ನೊಂದು ಮಂದಿ ವಧೂವರರ ವಿವಾಹದಲ್ಲಿ ಊರಿನ ಜನವೆಲ್ಲ ಉತ್ಸಾಹದಿಂದ ಭಾಗವಹಿಸಿದ್ದಿತು. ವಿಶ್ವ ಹಿಂದೂ ಪರಿಷತ್ ಕಾರ್ಯಕರ್ತರು, ಸ್ಕೌಟ್ ವಿದ್ಯಾರ್ಥಿಗಳು ವಿವಾಹದ ಚಟುವಟಿಕೆಗಳಲ್ಲೂ ಸಾಮೂಹಿಕಭೋಜನದಲ್ಲೂ ನೆರವು ನೀಡಿದರು.

ವಿವಾಹವಾದ ವಧೂವರರನ್ನು ಆಶೀರ್ವದಿಸಲು ಬಂದ ಆದಿಚುಂಚನಗಿರಿಯ ಶ್ರೀ ಶ್ರೀ ಬಾಲ ಗಂಗಾಧರ ನಾಥ ಸ್ವಾಮಿಜೀ ಅವರು 'ನಮ್ಮ ಸಮಾಜದ ದೊಡ್ಡ ಪಿಡುಗು ಆಗಿರುವ ವರದಕ್ಷಿಣೆಯ ಭೂತವನ್ನು ಹೊಡೆದೋಡಿಸಲೂ, ವಿವಾಹಕಾಲದ ಸಾಲದ ಕಷ್ಟವನ್ನು ತಪ್ಪಿಸಲೂ ಈ ರೀತಿಯ ವಿವಾಹಗಳು ಹೆಚ್ಚು ಹೆಚ್ಚಿಗೆ ನಡೆಯಬೇಕೆಂದೂ' ಕರೆ ನೀಡುತ್ತ ಹೆಣ್ಣು ಎಲ್ಲ ತ್ಯಾಗಗಳನ್ನೂ ಮಾಡಿ ಗಂಡನ ಮನೆಗೆ ಬರುವುದರಿಂದ ಅವಳನ್ನು ಗೌರವದಿಂದ ಪ್ರೀತಿಯಿಂದ ನೋಡಬೇಕೆಂದೂ ತಿಳಿಸಿದರು. ಹೆಣ್ಣು ಮಕ್ಕಳನ್ನು ಬಿಟ್ಟು ಮಾಡಿದ ಕೆಲಸ ಅಪೂರ್ಣವಾಗುತ್ತದೆ ಎಂದು ಯುವಕರಿಗೆ ತಿಳಿಸುತ್ತ ಅರಿಷಿಣದೊಡನೆ ಬೆರೆತರೆ ಮಾತ್ರವೇ ಅಕ್ಕಿ ಅಕ್ಷತೆಯಾಗುವುದೆಂದೂ ಹೆಣ್ಣು ಗಂಡು ಸೇರಿ ಮಾಡಿದ ಕೆಲಸವೇ ಶುಭವಾಗುವುದು ಎಂದರು.

ಶ್ರೀ ಮಧ್ವ ನಾರಾಯಣ ಶಾಸ್ತ್ರಿಗಳವರ ವೇದಘೋಷ. ಶ್ರೀ ಸಿರಿ ಕೃಷ್ಣದೇವರಾಯರ ಸ್ವಾಗತ. ಶ್ರೀ ಜೆ. ಎಸ್. ಪಾರ್ಥಸಾರಥಿ ಅವರಿಂದ ವಂದನೆ ನಡೆದ ಸಭೆಯಲ್ಲಿ ಸ್ವಾಮಿಗಳು ವಿವಾಹಗಳಿಗೆ ಮಾಂಗಲ್ಯಗಳನ್ನು ನೀಡಿದ ಶ್ರೀ ಬಿ. ಎಸ್. ಲಕ್ಷ್ಮೀನಾರಾಯಣ ಶೆಟ್ಟರು. ಹಾಗೂ ಬೃಹತ್ ಗಣಪತಿ ನಿರ್ಮಾಣಕ್ಕೆ ಉದಾರ ಕಾಣಿಕೆ ನೀಡಿದ ಶ್ರೀ ಬಿ. ಎಂ. ಕೋದಂಡರಾಮಶೆಟ್ಟರನ್ನು ಪುಷ್ಪಹಾರದಿಂದ ಸನ್ಮಾನಿಸಿದರು.

## ಹರಿದಾಸ ಸಾಹಿತ್ಯೋತ್ಸವ

ರಾಯಚೂರು ಜಿಲ್ಲೆಯ ಗಂಗಾವತಿಯ ಶ್ರೀ ರಾಮ ಮಂದಿರದಲ್ಲಿ ಆಗಸ್ಟ್ ತಿಂಗಳಿನಲ್ಲಿ ಮೂರು ದಿನಗಳ ಕಾಲ, ಸ್ಥಳೀಯ ಶ್ರೀರಾಮಚಂದ್ರ ಸೇವಾಟ್ರಸ್ಟ್ ಹಾಗೂ ತಿ. ತಿ. ದೇ. ದಾಸ ಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ ಹರಿದಾಸ ಸಾಹಿತ್ಯೋತ್ಸವ ನಡೆಯಿತು.

ಮೊದಲನೆಯ ದಿನ ಬೆಳಗ್ಗೆ ನಗರ ಸಂಕೀರ್ತನೆಯಾದ ನಂತರ ಏಳಲ ಭಜನಾ ಮಂಡಳಿಯವರಿಂದ ಭಜನೆ, ಕುಮಾರಿ ಉಮಾಜೋಷಿಯವರಿಂದ ದಾಸರ ಪದಗಳ ಹಾಡುಗಾರಿಕೆಗಳು ನಡೆದು ಸಂಜೆ ಕೃಷ್ಣದಾಸ ಮುರಗೋಡ ಇವರಿಂದ

## ಕರ್ನಾಟಕದಲ್ಲಿ......

ಭಜನೆಯ. ನಂತರ ಶ್ರೀ ಸಂಪಂಗಿರಾಮಾಚಾರ್ಯ ಗಿರಿಯವರ ಅಧ್ಯಕ್ಷತೆಯಲ್ಲಿ ಪುಸ್ತಕ ಬಿಡುಗಡೆ, ಹಾಗೂ ಟಿ. ಹನುಮಂತಾಚಾರ್ ಅವರಿಂದ ದಾಸರ ಕೀರ್ತನೆಗಳ ಹಾಡುಗಾರಿಕೆ. ನಂತರ ಪಂಡಿತ ಜಯತೀರ್ಥ ಆಚಾರ್ಯ ಮಳಗಿ ಅವರಿಂದ ಹರಿಕಥಾಮೃತಸಾರದ ಬಗ್ಗೆ ಉಪನ್ಯಾಸ ನಡೆಯಿತು. ಶ್ರೀ ಎ. ಮನೋಹರ ಶೆಟ್ಟಿಯವರು ಸ್ವಾಗತಿಸಿದ ಸಭೆಯಲ್ಲಿ ಭದ್ರಗಿರಿ ಅಚ್ಯುತದಾಸರು ಪುರಂದರದಾಸರ ಬಗ್ಗೆ ಹರಿಕಥೆ ಮಾಡಿದರು.

ಎರಡನೆಯದಿನ ಶ್ರೀ ಗುರುರಾಜ ಭಜನಾ ಮಂಡಳಿಯವರ ಸಾಮೂಹಿಕ ಭಜನೆಯ ನಂತರ ದಾಸರ ಪದಗಳ ಹಾಡುವಿಕೆಯ ಸ್ಪರ್ಧೆಯಿತ್ತು. ಅಂದು ಸಂಜೆ ಶ್ರೀ ಜಿ. ಜಿ. ಪುರೋಹಿತ ಅವರ ಅಧ್ಯಕ್ಷತೆಯಲ್ಲಿ ಶ್ರೀ ಜ. ಮಳಗಿಯವರು ಉಪನ್ಯಾಸ ಮಾಡಿದರು. ವಾಣಿ ಶ್ರೀ ಜಯಶ್ರೀಯವರ ಸಂಗೀತ ಸಭೆಯನಂತರ ಶ್ರೀ ಅಚ್ಯುತದಾಸರು ಕನಕದಾಸರ ಬಗೆ ಹರಿಕಥೆ ಮಾಡಿದರು.

ಮೂರನೆಯದಿನ ಶ್ರೀ ಯಾಜ್ಞವಲ್ಕ್ಯ ಭಜನಾ ಮಂಡಳಿಯ ಸಾಮೂಹಿಕ ಭಜನೆ. ಅಂದು ಸಂಜೆ

(40ನೇ ಪುಟ ನೋಡಿ)



ಸಾಮೂಹಿಕ ವಿವಾಹದಲ್ಲಿನ ವಧೂವರರು ಶ್ರೀಶ್ರೀ ಬಾಲಗಂಗಾಧರ ನಾಥ ಸ್ವಾಮಿಜೀಯವರಿಂದ ಆಶೀರ್ವಾದ ಪಡೆಯುತ್ತಿರುವಿಕೆ.



ಕುಂಭಾಭಿಷೇಕ ಹೊಂದುತ್ತಿರುವ ತಿರುಚಾನೂರು ಆಲಯ ವಿಮಾನದ ಒಂದು ನೋಟ.

—

# ವಾರ್ತಾಲಹರಿ

## ತಿರುಚಾನೂರು ತಾಯಾರ್‌ಗೆ ಬಂಗಾರದ ಗೋಪುರ

ತಿರುಚಾರು ಪದ್ಮಾವತೀ ದೇವಿ ಅಮ್ಮನವರ ದೇವಾಲಯದಲ್ಲಿನ ಗರ್ಭಗುಡಿಯ ವಿಮಾನಕ್ಕೆ ಹಾಗೂ ಧ್ವಜಸ್ತಂಭಕ್ಕೆ ಬಂಗಾರದ ಹೊದಿಕೆಯನ್ನು ಈಚೆಗೆ ಹೊದಿಸಲಾಯಿತು ತತ್ಸಂದರ್ಭದಲ್ಲಿ ಮೂರು ದಿನಗಳ ಕಾಲ ವೇದೋಕ್ತ ಹೋಮ ಹವನಗಳು ನಡೆದವು. ಮೂರುದಿನಗಳೂ ಉತ್ಸವದಂತೆ ನಿರ್ವಹಿಸಲಾದ ಈ ಕಾರ್ಯದ ಕೊನೆಯಲ್ಲಿ ದಿನಾಂಕ 7 ರಂದು ಕುಂಭಾಭಿಷೇಕವನ್ನು ಏರ್ಪಡಿಸಲಾಗಿದ್ದಿತು. ವಿಮಾನ ಹಾಗೂ ಧ್ವಜಸ್ತಂಭದ ಮೇಲ ಹೊದಿಕೆಯ ಬಂಗಾರದ ಲೇಪನಕ್ಕಾಗಿ 35 ಕಿಲೋ ಚಿನ್ನವನ್ನೂ 1.5 ಕಿಲೋ ತಾಮ್ರವನ್ನೂ ಉಪಯೋಗಿಸಲಾಗಿದೆ. ಈ ಉತ್ಸವಕ್ಕೆ ಆಂಧ್ರ ಪ್ರದೇಶದ ರೆವಿನ್ಯೂ ಇಲಾಖಾ ಪ್ರಧಾನ ಕಾರ್ಯದರ್ಶಿ ಶ್ರೀ ಜಯಸಿಂಹ ಅವರು ಹಾಜರಿದ್ದರು.

ಈ ಮೂರು ದಿನಗಳೂ ಉತ್ಸವಗಳನ್ನು ವೀಕ್ಷಿಸಲು ಬರುವ ಯಾತ್ರಿಕರಿಗಾಗಿ ವಿಶೇಷ ಬಸ್ ವ್ಯವಸ್ಥೆ ಮಾಡಲಾಗಿದ್ದಿತು. ಅತ್ಯಂತ ಹೆಚ್ಚಿನ ಜನ ಈ ಕಾರ್ಯಕ್ರಮಗಳನ್ನು ವೀಕ್ಷಿಸಿದರೆಂದು ವರದಿಗಳು ತಿಳಿಸುತ್ತವೆ.

## ಕೊಡೆಗಳ ಮೆರವಣಿಗೆ

ಮದರಾಸಿನ ತಿರುಪತಿ ಕೊಡೆಗಳ ದತ್ತಿನಿಧಿಯವರು ಪ್ರತಿವರ್ಷವೂ ಬ್ರಹ್ಮೋತ್ಸವ ಸಮಯದಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಶ್ವೇತ ಛತ್ರಗಳ ಕೊಡುಗೆಯನ್ನು ನೀಡುತ್ತಾರೆ. ಈ ವರ್ಷ 1-9-84 ರ ಸಂಜೆ ಮದರಾಸಿನಲ್ಲಿ ಈ ಶ್ವೇತ ಛತ್ರಗಳ ಪೂಜೆಯು ಅಲ್ಲಿನ ಹೈಕೋರ್ಟಿನ ನ್ಯಾಯಾಧೀಶ ಗೌ॥ ಕೆ. ಷಣ್ಮುಗಂ ಅವರ ಅಧ್ಯಕ್ಷತೆಯಲ್ಲಿ ಆರಂಭವಾಗಿ 22-9-84 ರಂದು ಪೂರ್ಣಪೂಜೆ ಮುಗಿದ ನಂತರ ಅಂದು ಸಂಜೆ 6 ಗಂಟೆಗೆ ಮೆರವಣಿಗೆಯಾಗಿ 23 ರಂದು ತಿರುಪತಿಯತ್ತ ಪ್ರಯಾಣ ಹೊರಡುವುದು. 30 ರಂದು ತಿರುಮಲೆಯನ್ನು ಸೇರಿ ಶ್ರೀಯವರ ಗರುಡೋತ್ಸವದ ಸಮಯದಲ್ಲಿ ಕಾಣಿಕೆಯಾಗಿ ನೀಡಲಾಗುವುದು.

## ಹೊಸ ಕಲ್ಯಾಣ ಮಂಟಪ

ಆದಿಲಾಬಾದ್ ಜಿಲ್ಲೆಯ ಮಾಂಚಿರ್ಯಾಲನಲ್ಲಿ ಹೊಸ ಕಲ್ಯಾಣ ಮಂಟಪಕ್ಕೆ ಇದೇ ಆಗಸ್ಟ್ 12 ರಂದು ಭೂಮಿಪೂಜೆಯನ್ನು ಮಾಡುತ್ತ ತಿ. ತಿ. ದೇ. ಬೋರ್ಡ್ ಸದಸ್ಯ ಶ್ರೀ ಪಿ. ಯಾದಗಿರಿಯವರು ಸನಾತನ ಧರ್ಮರಕ್ಷಣೆಯಲ್ಲಿ ತಿ. ತಿ. ದೇ. ಗಳ ವಿವಿಧ ಯೋಜನೆಗಳನ್ನು ಸದ್ವಿಯೋಗಗೊಳಿಸಲು ಕರೆ ನೀಡಿದರು. ಹೊಸ ಕಲ್ಯಾಣ ಮಂಟಪಗಳ ನಿರ್ಮಾಣಕ್ಕೆ ತಿ. ತಿ. ದೇ. ಪ್ರಾಧಾನ್ಯ ನೀಡುವುದೆಂದೂ ತಿಳಿಸಿದರು. ತಿ. ತಿ. ದೇ. ಪೌರಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಮಾತನಾಡುತ್ತ 1.9 ಕೋಟಿರೂಗಳ ವೆಚ್ಚದಲ್ಲಿ 13 ಕಲ್ಯಾಣ ಮಂಟಪಗಳೂ, 18 ಸತ್ರಗಳೂ ನಿರ್ಮಿತವಾಗಿವೆಯೆಂದೂ, 7.2 ಕೋಟಿ ರೂಗಳ ವೆಚ್ಚದಲ್ಲಿ 62 ಕಲ್ಯಾಣ ಮಂಟಪಗಳು ನಿರ್ಮಾಣದ ವಿವಿಧ ಹಂತಗಳಲ್ಲಿವೆಯೆಂದೂ, ತಿಳಿಸಿದರು.

ಆದಿಲಾಬಾದ್ ಜಿಲ್ಲಾ ಪರಿಷತ್ ಅಧ್ಯಕ್ಷರು ಶ್ರೀ ಮಧುಸೂಧನರೆಡ್ಡಿ ಮಾಂಚಿರ್ಯಾಲ ಪುರಪಾಲಕ ಸಂಘದ ಅಧ್ಯಕ್ಷರು ಶ್ರೀ ಎಸ್. ಎಸ್. ಸಾಂಬಯ್ಯ ತಮ್ಮ ಪ್ರಸಂಗಗಳಲ್ಲಿ ಸನಾತನ ಧರ್ಮ ರಕ್ಷಣೆಯಲ್ಲಿ ತಿ. ತಿ. ದೇ. ಗಳ ಯತ್ನಗಳನ್ನು ಶ್ಲಾಘಿಸಿದರು.

ಸಂಪ್ರೋಕ್ಷಣೆಯಲ್ಲಿನ ವೇದೋಕ್ತ ಧಾರ್ಮಿಕ ವಿಧಿಗಳ ನಿರ್ವಹಣೆಯಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಹಾಗೂ ಅವರ ಕುಟುಂಬ.



## ಮೋಟಾರ್ ಸೈಕಲ್ ಕಾಣಿಕೆ

ಆಗಸ್ಟ್ 15 ರಂದು ತಿರುಮಲೆಯಲ್ಲಿ, ಮದರಾಸಿನ ಇಂಡೋ–ಸುಜುಕಿ ಕಂಪನಿ ತಯಾರಿಸಿದ ಮೊಟ್ಟ ಮೊದಲ ಮೋಟಾರ್ ಸೈಕಲ್ ಅನ್ನು ಆ ಸಂಸ್ಥೆಯ ಮ್ಯಾನೇಜಿಂಗ್ ಡೈರೆಕ್ಟರ್ ಶ್ರೀಕೃಷ್ಣನ್ ಅವರು, ಶ್ರೀ ವೆಂಕಟೇಶ್ವರಸ್ವಾಮಿಗೆ ಕಾಣಿಕೆಯಾಗಿ ಸಮರ್ಪಿಸಿದರು. ಸುಮಾರು 12 ಸಾವಿರ ರೂಗಳ ಬೆಲೆಯ ಈ ಕಾಣಿಕೆಯನ್ನು ತಿ. ತಿ. ದೇ. ಗಳ ಪರವಾಗಿ ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಜೆ. ವೆಂಕಟೇಶ್ವರಲು ಅವರು ಸ್ವೀಕರಿಸಿದರು.

## ಉತ್ಸವ ವಿಗ್ರಹಗಳ ಪ್ರತಿಷ್ಠಾಪನೆ

ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರ ಸ್ವಾಮಿ ಆಲಯದಲ್ಲಿ ಶ್ರೀ ವೇಣು ಗೋಪಾಲಸ್ವಾಮಿ, ರುಕ್ಮಿಣೀಸತ್ಯಭಾಮೆಯರ ಉತ್ಸವ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಯಿತು. ಈ ಸಂದರ್ಭದಲ್ಲಿ ಆಗಸ್ಟ್ 20 ರಿಂದ ಮೂರು ದಿನಗಳ ಕಾಲ ಲಘು ಸಂಪ್ರೋಕ್ಷಣೆ ನಡೆಯಿತು. 22 ನೇ ತಾರೀಖು ಗೋಕುಲಾಷ್ಟಮಿ ಸಂದರ್ಭದಲ್ಲಿ ಶ್ರೀ ಕೃಷ್ಣ ಪೂಜೆ ನಡೆಯಿತು.

## ಬಂಗಾರದ ಆಭರಣಗಳ ಹರಾಜು

ತಿ. ತಿ. ದೇ. ಗಳಲ್ಲಿ ಸುಮಾರು ವರ್ಷಗಳಿಂದ ಸಂಗ್ರಹಿತವಾಗಿರುವ ಕಲ್ಲು ಹರಳುಗಳ ಬಂಗಾರದ ಆಭರಣಗಳಲ್ಲಿ ಸುಮಾರು 10.55 ಕಿಲೋಗ್ರಾಂ ತೂಕದ ಆಭರಣಗಳನ್ನು ಈ ಮಧ್ಯೆ ಹರಾಜು ಮಾಡಲಾಯಿತು. ಈ ವರ್ಷದಲ್ಲಿ ಮೂರನೆಯ ಬಾರಿ ನಡೆದ ಈ ಹರಾಜಿನಲ್ಲಿ ಸುಮಾರು 13.43 ಲಕ್ಷ ರೂಗಳ ಆದಾಯವುಂಟಾಯಿತು.

## ಪವಿತ್ರೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ದೇವಾಲಯದಲ್ಲಿ ಆಗಸ್ಟ್ 7 ರಿಂದ ಮೂರುದಿನಗಳ ಪರ್ಯಂತ ಪವಿತ್ರೋತ್ಸವದಲ್ಲಿ 50 ಸಾವಿರಕ್ಕೂ ಮಿಕ್ಕಿದ ಭಕ್ತರು ಭಾಗವಹಿಸಿದ್ದರು. ಯಾಗಶಾಲೆಯಲ್ಲಿ ಉತ್ಸವ ಮೂರ್ತಿಗಳನ್ನು ಅಲಂಕರಿಸಿ, ಶಾಸ್ತ್ರೋಕ್ತವಾಗಿ ಯಜ್ಞವನ್ನು ನಿರ್ವಹಿಸಲಾಯಿತು. ತತ್ಸಂದರ್ಭದಲ್ಲಿ ನಾರಾಯಣಗಿರಿಯಲ್ಲಿ ಶ್ರೀಪಾದಗಳಿಗೂ ಪೂಜೆ ನಡೆಯಿತು.

ಹುಂಡಿಯ ಮೂಲಕ ರೂ 8, 41, 561, ಪ್ರಸಾದಗಳ ಮಾರಾಟದಿಂದ ರೂ 2, 65, 625 ಹಾಗೂ ಆರ್ಜಿತ ಸೇವೆಗಳ ಮೂಲಕ ರೂ 1, 43, 501 ಆದಾಯವುಂಟಾಯಿತು.



ಗೋಕುಲಾಷ್ಟಮಿ ಸಂದರ್ಭದಲ್ಲಿ ನಡೆದ ಸಂಗೀತ ಸಭೆ. ಅನ್ನಮಾಚಾರ್ಯರ ಶ್ರೀ ಕೃಷ್ಣ ಸಂಕೀರ್ತನೆಗಳನ್ನು ಹಾಡುತ್ತ ಅನ್ನಮಾಚಾರ್ಯ ಕಲಾವಿದರು.

## ಗೋಪೂಜೆ

ಆಗಸ್ಟ್ 20 ರಂದು ಕೃಷ್ಣಾಷ್ಟಮಿ ಸಂದರ್ಭವಾಗಿ ಶ್ರೀವೆಂಕಟೇಶ್ವರ ಡೈರಿ ಫಾರಂ ನಲ್ಲಿ ಗೋಪೂಜೆಯನ್ನು ನಿರ್ವಹಿಸಲಾಯಿತು ಚಿನ್ಮಯ ಮಿಷನ್‌ನ ಮಾತಾ ಶಾರದಾ ಪ್ರಿಯಾನಂದ ಅವರು ತತ್ಸಂದರ್ಭದಲ್ಲಿ 19 ರಿಂದ 23 ರವರೆಗೆ ಭಾಗವತದ ಬಗ್ಗೆ ಉಪನ್ಯಾಸಗಳನ್ನು ನೀಡಿದರು.

ಆಗಸ್ಟ್ 21 ರಂದು ತಿರುಮಲೇಶ್ವರನ ಆಲಯದಲ್ಲಿ ಗೋಕುಲಾಷ್ಟಮಿ ಉತ್ಸವವನ್ನು ನಿರ್ವಹಿಸಲಾಯಿತು. ತತ್ಸಂದರ್ಭದಲ್ಲಿ ಉಟ್ಲ ಉತ್ಸವವೂ ನಡೆಯಿತು.

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲೂ ಕೃಷ್ಣಾಷ್ಟಮಿಯನ್ನು ಸರಳವಾಗಿ ಆಚರಿಸಲಾಯಿತು ಅನ್ನಮಾಚಾರ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು

ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ನಡೆದ ಶ್ರೀ ವಿನಾಯಕ ಆರಾಧನೆಯ ಸಂಗೀತ ಸಭೆಯ ಒಂದು ನೋಟ





ತಿರುಚಾನೂರಿನಲ್ಲಿ ಡಾ॥ ಶಂಕರದಯಾಳ್ ಶರ್ಮ ಹಾಗೂ ಕುಟುಂಬ.

ಅವರ ವ್ಯಾಖ್ಯಾನದಿಂದ ಕೂಡಿದ ಸಂಗೀತ ಕಚೇರಿಯಲ್ಲಿ ಅನ್ನಮಾಚಾರ್ಯರು ರಚಿಸಿದ ಶ್ರೀಕೃಷ್ಣ ಗೀತೆಗಳನ್ನು ಶ್ರೀ ನಾಗೇಶ್ವರನಾಯುಡು ಶ್ರೀ ಪಿ. ಎಸ್. ರಂಗನಾಥ್ ಹಾಡಿದರು.

## ತಿರುಮಲೇಶನನ್ನು ಸಂದರ್ಶಿಸಿದ ನೂತನ ರಾಜ್ಯಪಾಲರು

ಆಂಧ್ರ ಪ್ರದೇಶದ ನೂತನ ರಾಜ್ಯಪಾಲರಾಗಿ ನೇಮಕವಾದ ಡಾ॥ ಶಂಕರದಯಾಳ ಶರ್ಮ ಅವರು ಕುಟುಂಬ ಸಮೇತರಾಗಿ ತಿರುಮಲೇಶನನ್ನು ಸಂದರ್ಶಿಸಿ ಆರಾಧನೆ ಮಾಡಿದರು. ಆಲಯ ಮರ್ಯಾದೆಗಳೊಂದಿಗೆ ಅವರನ್ನು ಸ್ವಾಗತಿಸಿದ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಅವರು ತಿರುಮಲೆ-ತಿರುಪತಿ ದೇವಸ್ಥಾನಗಳ ಪುರಾಣವನ್ನೂ ತಿ. ತಿ. ದೇ. ಗಳ ಸಾಮಾಜಿಕ, ಧಾರ್ಮಿಕ, ಕಾರ್ಯಕ್ರಮಗಳನ್ನೂ ವಿವರಿಸಿದರು.

ರಾಜ್ಯಪಾಲರು ಮಾರನೆಯದಿನ ತಿರುಚಾನೂರಿನ ಶ್ರೀ ಅಲಮೇಲು ಮಂಗಾ ದೇವಾಲಯವನ್ನೂ ವೀಕ್ಷಿಸಿ ತಾಯಿಯ ಆಶೀರ್ವಾದವನ್ನು ಪಡೆದರು.

## 1984 ಅಕ್ಟೋಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 1. | ಸೋಮವಾರ | ಸರಸ್ವತೀ ಪೂಜೆ. |
| 2. | ಮಂಗಳವಾರ | ಗಾಂಧೀಜಯಂತಿ, ದುರ್ಗಾಷ್ಟಮಿ. |
| 3. | ಬುಧವಾರ | ಮಹಾನವಮಿ, ಆಯುಧಪೂಜೆ, ಶ್ರೀ ವೆಂಕಟೇಶ್ವರಸ್ವಾಮಿ ರಥೋತ್ಸವ. |
| 4. | ಗುರುವಾರ | ವಿಜಯದಶಮಿ, ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದ ಚಕ್ರತೀರ್ಥ. |
| 23. | ಮಂಗಳವಾರ | ನರಕಚತುರ್ದಶಿ, ವೇದಾಂತದೇಶಿಕರ ಉತ್ಸವಾರಂಭ. |
| 24. | ಬುಧವಾರ | ದೀಪಾವಳಿ, ಧನಲಕ್ಷ್ಮೀ ಪೂಜೆ. |

## ನನ್ನಯ ಭಾರತದ ಸುಲಭ ಆವೃತ್ತಿ

ತೆಲುಗಿನ ಆದಿಕವಿ ನನ್ನಯನ ಭಾರತವನ್ನು ಜನಸಾಮಾನ್ಯರಿಗೂ ಅರ್ಥವಾಗುವಂತೆ ಸರಳ ಸಮಕಾಲೀನ ತೆಲುಗಿನಲ್ಲಿ ಪ್ರಕಟಿಸಲು ತಿ. ತಿ. ದೇ. ಸಂಕಲ್ಪಿಸಿದೆ. ಪ್ರತಿಪದ್ಯಕ್ಕೂ ಅರ್ಥ, ತಾತ್ಪರ್ಯ, ವ್ಯಾಖ್ಯಾಗಳೊಡನೆ ಆದಿ, ಸಭಾ, ಅರಣ್ಯ ಪರ್ವಗಳನ್ನು ಐದು ಭಾಗಗಳಲ್ಲಿ ಪ್ರಕಟಿಸಲಾಗುವುದು. ಡಾ॥ ದಿವಾಕರ್ಲ ವೆಂಕಟಾವಧಾನಿ, ಡಾ॥ ಎ. ವೆಂಕಟಸುಬ್ಬಯ್ಯ, ಡಾ॥ ಎನ್. ರಾಮಕೃಷ್ಣಮಾಚಾರ್ಯರುಗಳು ಈ ಪ್ರಕಟನೆಯ ಪರ್ಯವೇಕ್ಷಣೆಯನ್ನು ನಿರ್ವಹಿಸುವರು. ★



(37ನೇ ಪುಟದಿಂದ)

ಕರ್ನಾಟಕದ ದೇ ವಾ ದಾ ಯ ಇಲಾಖಾ ಕಮೀಷನರ್ ಶ್ರೀ ಎಸ್. ವಿಠಲರಾವ್ ಅವರ ಅಧ್ಯಕ್ಷತೆಯಲ್ಲಿ ಹರಿದಾಸ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಗಾಗಿ ಪಂ. ಕೇಶವಾಚಾರ್ಯ ಜಾಲಿಹಾಳ, ಶ್ರೀ ಸಿರಿವಾರ ರಾಮಾಚಾರ್ಯ ಅವರಿಗೆ ಸನ್ಮಾನ ನಡೆದು ಶ್ರೀ ಬಿ. ವಿದ್ಯಾನಂದ ಅವರಿಂದ ಉಪನ್ಯಾಸ ನಡೆಯಿತು. ಶ್ರೀ ಅಚ್ಯುತದಾಸರು ಹರಿಕಥೆ ನಡೆಸಿಕೊಟ್ಟರು. ಬೆಂಗಳೂರಿನ ಪ್ರಭಾತ ಕಲಾವಿದರಿಂದ ಶ್ರೀನಿವಾಸ ಲೀಲಾ ವೈಭವ ಜನವನ್ನು ಆಕರ್ಷಿಸಿತು.

ತತ್ಸಂಬಂಧದಲ್ಲಿ ದಾ ಸ ಸಾ ಹಿ ತ್ಯ ವಸ್ತು ಪ್ರದರ್ಶನವೂ ತಿ. ತಿ. ದೇ. ಪುಸ್ತಕ ಮಾರಾಟವೂ ಏರ್ಪಾಡಾಗಿದ್ದು ಎರಡೂ ಅತಿ ಹೆಚ್ಚಿನ ಜನವನ್ನು ಆಕರ್ಷಿಸುವಲ್ಲಿ ಸಫಲವಾದವು. ★

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

